ಜಗದ್ಗುರು ಶ್ರೀ ಮಧ್ವಾಚಾರ್ಯರ 750 ನೇ ಜಯಂತಿಯ
ಮಹಾಮಹೋತ್ಸವ ಸಂದರ್ಭದ ಪ್ರಕಟಣೆ

---

# ಕನ್ನಡ ಹರಿದಾಸ ಸಾಹಿತ್ಯ

ಅರಳುಮಲ್ಲಿಗೆ ಪಾರ್ಥಸಾರಥಿ

ಪ್ರಕಾಶನ
ಅಖಿಲ ಭಾರತ ಮಾಧ್ವ ಮಹಾಮಂಡಲ
ಪೂರ್ಣಪ್ರಜ್ಞನಗರ, ಬೆಂಗಳೂರು-28

# ಅನುಗ್ರಹವಚನ

॥ "ಶ್ರೀ ಶ್ರೀ ಗೋಪೀನಾಥೋ ವಿಜಯತೇ' ॥

ಜಗದ್ಗುರು ಶ್ರೀ ಮಧ್ವಾಚಾರ್ಯರ 750ನೇ ಜಯಂತಿಯ ಮಹಾ ಮಹೋತ್ಸವ ಸಂದರ್ಭದಲ್ಲಿ ಅಖಿಲ ಭಾರತ ಮಾಧ್ವ ಮಹಾಮಂಡಲ, ಉತ್ತಮ ಕಾರ್ಯಗಳನ್ನು ಹಮ್ಮಿಕೊಂಡಿದೆ. ಅದರಲ್ಲೂ ಶಾಶ್ವತವಾಗಿ ನಿಲ್ಲಬಲ್ಲ ಪುಸ್ತಕಗಳ ಪ್ರಕಟಣೆಯ ಕಾರ್ಯಕ್ರಮವಂತೂ ಪ್ರಶಂಸನೀಯ ಈ ಐತಿಹಾಸಿಕ ಸಂದರ್ಭದಲ್ಲಿ ನಮ್ಮ ನಾಡಿನ ಹರಿದಾಸ ಸಾಹಿತ್ಯ ವಿದ್ವನ್ಮಣಿಗಳಾದ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರಿಂದ "ಹರಿದಾಸ ಸಾಹಿತ್ಯ" ಕುರಿತ ಈ ಗ್ರಂಥವನ್ನು ಬರೆಸಿ ಪ್ರಕಟಿಸುತ್ತಿರುವುದು ನಮಗೆ ತುಂಬಾ ಹರ್ಷ ತಂದಿದೆ. ಎರಡು ಕಾರಣಗಳು ಇದಕ್ಕೆ ಒಂದು, ಅರಳುಮಲ್ಲಿಗೆ ಪಾರ್ಥಸಾರಥಿಯವರು ಈ ವರ್ಷ ಬೆಂಗಳೂರಿನಲ್ಲಿ ನಡೆಯುತ್ತಿರುವ ಅಖಿಲ ಭಾರತ ಹರಿದಾಸ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು. ಈಗಾಗಲೇ "ಶ್ರೀ ಪಾದರಾಜ ಸಂಪುಟ", "ಶ್ರೀ ವಾದಿರಾಜ ಸಂಪುಟ ಗಳ ಮೂಲಕ ಹರಿದಾಸ ಸಾಹಿತ್ಯದ ಕ್ಷೇತ್ರದಲ್ಲಿ ಉನ್ನತ ಮಟ್ಟದ ಕಾರ್ಯ ಸಾಧನೆಗೆ ನಿದರ್ಶನವಾಗಿರುವ ಅರಳು ಮಲ್ಲಿಗೆಯವರು ಶ್ರೀ ಪಾದರಾಜರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದಾರೆ ನಮ್ಮೊಡನೆ ಅನೇಕ ಬಾರಿ ಹರಿದಾಸರು ಹುಟ್ಟಿ ಬೆಳೆದು ಮಹಿಮೆ ಮೆರೆದ ಸ್ಥಳಗಳಿಗೆ ಬಂದು ಸಂಶೋಧನೆ ನಡೆಸಿದ್ದಾರೆ. ಈ ಸಂತೋಷಕ್ಕೆ ಇನ್ನೊಂದು ಕಾರಣ, ಅಖಿಲ ಭಾರತ ಮಾಧ್ವ ಮಹಾಮಂಡಲ ಬೆಂಗಳೂರಿನಲ್ಲಿ ಮಧ್ವಾಚಾರ್ಯರ 750ನೆಯ ಜಯಂತಿಯ ಮಹಾಮಹೋತ್ಸವದಲ್ಲಿ ಬಿಡುಗಡೆ ಮಾಡಲು ಈ ಪುಸ್ತಕವನ್ನು ಪ್ರಕಟಿಸಿದೆ. ಮಾಧ್ವ ಮಹಾಮಂಡಲ ಈಗಾಗಲೇ ಅನೇಕ ಸ್ತುತ್ಯಕಾರ್ಯಗಳನ್ನು ಮಾಡಿದ್ದು, ಶ್ರೀಪಾದರಾಜರ ಪ್ರೀತ್ಯಾದರ ಪಾತ್ರವಾದ ಹರಿದಾಸ ಸಾಹಿತ್ಯ ಕ್ಷೇತ್ರದಲ್ಲೂ ಪ್ರಕಟನೆ ಕೈಗೊಳ್ಳುತ್ತಿರುವುದು,

ಅಖಿಲ ಭಾರತ ಮಾಧ್ವ ಮಹಾಮಂಡಲದ ಈ ಸಾಧನೆ ಇತೋಪ್ಯತಿಶಯವಾಗಿ ಬೆಳ್ಗಲಿ ಎಂದು ಅಭಿನಂದಿಸುತ್ತೇವೆ. ಈ ಕೃತಿಯ ಲೇಖಕರಾದ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರಿಗೆ ನಮ್ಮ ಆರಾಧ್ಯಮೂರ್ತಿ ಶ್ರೀ ದಯುಪದನ ರಂಗವಿಠಲಾತ್ಮಕ ಶ್ರೀ ಗೋಪೀನಾಥ ದೇವರು ವಿಶೇಷ ಅನುಗ್ರಹಿಸಲೆಂದು ಮಾಡುವ ನಾರಾಯಣ ಸ್ಮರಣೆಗಳು.

ಶ್ರೀ ವಿಜ್ಞಾನ ನಿಧಿ ತೀರ್ಥ ಶ್ರೀ ಪಾದಂಗಳವರು
ಶ್ರೀ ಪಾದರಾಜಮಠ—ಮುಳಬಾಗಿಲು

# ಪ್ರಕಾಶಕರ ನುಡಿ

ಅಖಿಲ ಭಾರತ ಮಾಧ್ವ ಮಹಾಮಂಡಲವು ಜಗದ್ಗುರು ಶ್ರೀ ಮಧ್ವಾಚಾರ್ಯರ 750ನೆಯ ಜಯಂತಿಯ ಮಹಾ ಮಹೋತ್ಸವವನ್ನು ರಾಷ್ಟ್ರದ ಎಲ್ಲ ಭಾಗಗಳಲ್ಲೂ ವೈಭವದಿಂದ ಆಚರಿಸಬೇಕೆಂದು ನಿರ್ಧರಿಸಿತು ಬೆಂಗಳೂರಿನಲ್ಲಿ ಮಧ್ವಾಚಾರ್ಯರ ರಾಷ್ಟ್ರೀಯ ಉತ್ಸವವನ್ನು ವ್ಯವಸ್ಥೆ ಮಾಡಲು ನಿರ್ಧರಿಸಿದಾಗ ಈ ಎಲ್ಲ ಯೋಜನೆ–ಸಾಧನೆಗಳ ಸ್ಫೂರ್ತಿಮೂರ್ತಿಗಳಾದ ಪೇಜಾವರ ಮಠಾಧೀಶರು ಕೆಲವು ಸಾಹಿತ್ಯಿಕ ಕಾರ್ಯಗಳನ್ನು ಪ್ರಕಟನೆಗಳನ್ನು ಮಾಡಬೇಕೆಂದು ಸಲಹೆ ನೀಡಿದರು ಆ ಮೇರೆಗೆ ವಿದ್ವಾಂಸರಾದ ಶ್ರೀ ಪ್ರಭಂಜನ ಅವರಿಂದ "ಸುಮಧ್ವವಿಜಯ" ಗ್ರಂಥವನ್ನು ವಿದ್ವಾಂಸರಾದ ಡಾ॥ಬಿ ಎನ್ ಕೆ ಶರ್ಮರವರಿಂದ ಇಂಗ್ಲೀಷಿನಲ್ಲಿ "ಗೀತಾಭಾಷ್ಯ' ಗ್ರಂಥವನ್ನೂ ದಾಸಸಾಹಿತ್ಯ ವಿದ್ವಾಂಸರಾದ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರಿಂದ "ಕನ್ನಡ ಹರಿದಾಸ ಸಾಹಿತ್ಯ" ಎಂಬ ಗ್ರಂಥವನ್ನು ಬರೆಸಿ ಅಖಿಲ ಭಾರತ ಮಾಧ್ವ ಮಹಾಮಂಡಲವು ಪ್ರಕಟಣೆ ಮಾಡಿದೆ

ಪ್ರಸ್ತುತ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರ ಈ ಕೃತಿ "ಕನ್ನಡ ಹರಿದಾಸ ಸಾಹಿತ್ಯ ದಾಸ ಸಾಹಿತ್ಯದ ಮೂಲ ನೆಲೆಗಳನ್ನು, ಗತಿಪ್ರಗತಿಗಳನ್ನು ಪ್ರಭಾವದ ಪರಂಪರೆಯನ್ನು ಸ್ವಾರಸ್ಯವಾಗಿ ಪ್ರಕಟಿಸಿದೆ. ಕನ್ನಡ ಸಾಹಿತ್ಯ ರಂಗದಲ್ಲಿ ಪ್ರಖ್ಯಾತರಾಗಿರುವ ಅರಳುಮಲ್ಲಿಗೆಯವರ ಅನನ್ಯಭಾಷೆ, ಹಾಗೂ ದಾಸಸಾಹಿತ್ಯದ ಬಗೆಗೆ ಅವರಿಗಿರುವ ವಿಶೇಷ ಕಳಕಳಿ, ಪರಿಶ್ರಮ ಈ ಕೃತಿಯಲ್ಲಿ ಗೋಚರಿಸುತ್ತಿದೆ ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ವ್ಯವಸ್ಥಿತವಾಗಿರುವ ಅಖಿಲ ಭಾರತ ಹರಿದಾಸ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಶ್ರೀ ಅರಳು ಮಲ್ಲಿಗೆ ಪಾರ್ಥಸಾರಥಿಯವರು ಆಯ್ಕೆಯಾಗಿರುವುದಕ್ಕಾಗಿ ಅವರಿಗೆ ಮಾಧ್ವ ಮಹಾಮಂಡಲ ಅಭಿನಂದನೆಗಳನ್ನರ್ಪಿಸುತ್ತಿದೆ

ಈಗಾಗಲೇ "ಶ್ರೀ ಪಾದರಾಜ ಸಂಪುಟ' "ವಾದಿರಾಜ ಸಂಪುಟ"

ಇಂತಹ ಪ್ರಕಟಣಾ ಕಾರ್ಯಗಳಿಗೆ ಪ್ರೇರಣೆ ನೀಡಿ ಮಾಧ್ವ ಮಹಾ ಮಂಡಲಕ್ಕೆ ಚೈತನ್ಯಶಕ್ತಿಯಾಗಿರುವ ಪೂಜ್ಯಶ್ರೀ ಪೇಜಾವರ ಮಠಾಧೀಶರಿಗೆ ನಾವು ಅತ್ಯಂತ ಭಕ್ತಿಪೂರ್ವಕ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತಿದ್ದೇವೆ. ಈ ಕೃತಿಗೆ ಅನುಗ್ರಹವಚನ ನೀಡಿ ಕೃತಿಯ ಮೌಲ್ಯ ಹೆಚ್ಚಿಸಿರುವ ಪೂಜ್ಯಶ್ರೀವಾದಿರಾಜಮಠಾಧೀಶರಿಗ ನಮ್ಮ ಅತ್ಯಂತ ಭಕ್ತಿಪೂರ್ವಕ ಸಾಷ್ಟಾಂಗ ನಮಸ್ಕಾರಗಳು. ನಾಡಿನ ಜನ ನಮ್ಮ ಈ ಪ್ರಕಟಣೆಗಳನ್ನು ಕೊಂಡು ಓದಿ ಆನಂದ ಪಡುವಂತಾಗಲಿ ಎಂದು ಹಾರೈಸುತ್ತಾ ಆಚಾರ್ಯ ಮಧ್ವರ 750ನೆಯ ಸಂಭ್ರಮ ಸಡಗರಗಳ ಈ ಉತ್ಸವದಲ್ಲಿ ಎಲ್ಲರಿಗೂ ಶುಭ ಹಾರೈಸುತ್ತಿದ್ದೇವೆ.

12–2–1989
ಬೆಂಗಳೂರು

**ವಿಷ್ಣುಮೂರ್ತಿ**
**ವಿಕ್ರಾಡಿತ್ಯಾಯ**
ಅಧ್ಯಕ್ಷರು

**ಕೆ. ಆರ್. ಜಯತೀರ್ಥ**
ಕಾರ್ಯದರ್ಶಿ

ಅಖಿಲ ಭಾರತ ಮಾಧ್ವ ಮಹಾಮಂಡಲ ಬೆಂಗಳೂರು.

# ಲೇಖಕರ ನುಡಿ

ಹರಿದಾಸ ಸಾಹಿತ್ಯದ ತುಂಬಾ ರಾಮನಾಮ ಪಾಯಸದ, ಕೃಷ್ಣನಾಮ ಸಕ್ಕರೆಯ ಘಮಘಮಾ ವಾಸನೆ. ಬಲ್ಲವರೇ ಬಲ್ಲರು ಬೆಲ್ಲದ, ಸವಿಯ ಎನ್ನುವಂತೆ ದಾಸ ಸಾಹಿತ್ಯದ ಸವಿಯಲ್ಲಿ ಹುಚ್ಚಿದ್ದವರಿಗೆ ಆ ಹುಚ್ಚೇ ಮೆಚ್ಚು ಹುಚ್ಚು ಹಿಡಿಯಿತೋ ಎನಗೆ ಹುಚ್ಚು ಹಿಡಿಯಿತು, ಅಚ್ಯುತನಾ ನಾಮವೆಂಬ ಹುಚ್ಚು ಹುಚ್ಚು ತಲೆಗೆ ಏರಿ' ಎಂದ ದಾಸರ ಪಥ ಮುಕ್ತಿಪಥ. ಭಕ್ತಿರಥದಲ್ಲಿ ಎಲ್ಲರನ್ನು ಕರೆದುಕೊಂಡು 'ಪಾಥೇಯವ ಕಟ್ಟಿರೋ ವೈಕುಂಠಕೆ ಪಯಣ ಸಮ್ಮತವಾದರೆ' ಎನ್ನುವ ದಾಸರು 'ಒಂದೇ ಕೂಗಳತೆಯ ವೈಕುಂಠವನ್ನು, ಅದರಲ್ಲಿ ನೆಲೆಸಿರುವ ಪರಮಾತ್ಮನನ್ನು ಕಂಡವರು. ಎಲ್ಲರನ್ನೂ ಅಲ್ಲಿಗೆ ಕರೆದೊಯ್ಯುವ ವಿಶ್ವಾಸ, ಭರವಸೆಯಿರುವವರು ಸಿಂಧುಶಯನನನ್ನು ಭಜಿಸುವ ಹರಿದಾಸರ ಬಿಂದುಗಂಗೋದಕಕ್ಕೆ ನನ್ನ ಈ ದಾಸಸಾಹಿತ್ಯ ಸೇವೆ ಕೇವಲ ಒಂದು ತುಳಸೀದಳ ಮಾತ್ರ

ಮಧ್ವಾಖ್ಯಂ ಮಂತ್ರಸಿದ್ಧಂ ಎನ್ನುವಂತೆ ಆಚಾರ್ಯ ಮಧ್ವರನ್ನು ನೆನೆದು ಮಾಡಿದ ಕೆಲಸ ಅದು ಶ್ರೀಹರಿಪ್ರೀತಿಯಾಗುತ್ತದೆ ಪೇಜಾವರ ಮಠದ ಪೂಜ್ಯ ಶ್ರೀಪಾದರಿಗೆ ಈ ಮಧ್ವ ಮಂಗಳದ ಪರಮ ರಹಸ್ಯ ಚೆನ್ನಾಗಿ ಗೊತ್ತಿರುವುದರಿಂದ ಆಚಾರ್ಯ ಮಧ್ವರ 750ನೆಯ ಜಯಂತಿಯ ಮಹಾ ಮಹೋತ್ಸವದಲ್ಲಿ ಅವರು ಎಲ್ಲರಿಂದಲೂ ಉತ್ತಮ ಕಾರ್ಯಗಳನ್ನೇ ಮಾಡಿಸುತ್ತಿದ್ದಾರೆ. ಅವರ ಪ್ರೇರಣೆಯ ಫಲವೇ ಈ ಕೃತಿ ಅವರ ಅನುಗ್ರಹವೇ ಇದರ ವೃತಿ. ಪೂಜ್ಯ ಶ್ರೀ ಪೇಜಾವರ ಶ್ರೀ ಪಾದಂಗಳವರಿಗೆ ನನ್ನ ಭಕ್ತಿ ಪೂರ್ವಕ ಸಾಷ್ಟಾಂಗ ನಮಸ್ಕಾರಗಳು

ದಾಸಸಾಹಿತ್ಯಕ್ಕೆ ಸ್ಫೂರ್ತಿಯ ಚಿಲುಮೆ ಶ್ರೀ ಪಾದರಾಜರು ಶ್ರೀಪಾದ ರಾಜರ ಪರಮಾನುಗ್ರಹವೇ ನನ್ನ ಬರವಣಿಗೆಯ ಶಕ್ತಿ ಇಂತಹ ಶಕ್ತಿಯನ್ನು ತಮ್ಮ ಮಂಗಳದ ಮುನ್ನುಡಿಯಾಗಿ, ಇದೇ ಕೃತಿಯ ಹೊನ್ನುಡಿಯಾಗಿ

ಶ್ರೀ ಪಾದರಾಜ ಮಠಾಧೀಶರಾದ ಶ್ರೀ ವಿಜ್ಞಾನನಿಧಿ ತೀರ್ಥರು ನೀಡಿ ಈ ಕೃತಿಯ ಗೌರವವನ್ನು, ಮೌಲ್ಯವನ್ನು ತಮ್ಮ ಅನುಗ್ರಹ ವಚನದ ಮೂಲಕ ಹೆಚ್ಚಿಸಿದ್ದಾರೆ. ಪೂಜ್ಯ ಶ್ರೀ ವಿಜ್ಞಾನನಿಧಿ ತೀರ್ಥ ಶ್ರೀ ಪಾದಂಗಳವರಿಗೆ ನನ್ನ ಭಕ್ತಿ ಪೂರ್ವಕ ಸಾಷ್ಟಾಂಗ ನಮಸ್ಕಾರಗಳು

ಅಖಿಲ ಭಾರತ ಮಾಧ್ವ ಮಹಾ ಮಂಡಲ ಮಾಧ್ವ ಜನಾಂಗದ ಆಶೋತ್ತರಗಳನ್ನು ಬಿಂಬಿಸುವ, ಸಾಂಸ್ಕೃತಿಕವಾಗಿ ಇಡೀ ಮಾಧ್ವ ಸಮುದಾಯವನ್ನು ಸಂಘಟಿಸಿರುವ ಸ್ಪಂದಿಸಿರುವ ಸಂಸ್ಥೆ ಈ ಸಂಸ್ಥೆಯ ಸಾಧನೆ ಹಲವಾರು ಆದರ ಮಧ್ವಾಚಾರ್ಯರ 750ನೇ ಜನ್ಮ ದಿನದ ಮಹೋತ್ಸವವನ್ನು ಹಮ್ಮಿಕೊಂಡು ಅದನ್ನು ತುಂಬ ವೈಭವದಿಂದ ಆಚರಿಸುತ್ತಿರುವುದು ಇದರ ಮಹತ್ವದ ಸಾಧನೆಗಳಲ್ಲೊಂದು ಈ ಸಂದರ್ಭದಲ್ಲಿ ಬಿಡುಗಡೆ ಮಾಡಲು ಈ ಕೃತಿಯನ್ನು ನನ್ನಿಂದ ಬರೆಸಿ ಪ್ರಕಟಿಸಿದ ಮಾಧ್ವ ಮಹಾಮಂಡಲದ ಅಧ್ಯಕ್ಷರಾದ ಶ್ರೀ ವಿಷ್ಣುಮೂರ್ತಿ ಪರ್ಕಾಡಿತ್ತಾಯ ಅವರಿಗೆ, ವಿದ್ವಾನ ಹಾಗೂ ಆತ್ಮೀಯತೆಯ ಒತ್ತಾಸೆ ಕೊಟ್ಟಿರುವ ಮಾಧ್ವ ಮಹಾಮಂಡಲದ ಕಾರ್ಯದರ್ಶಿಯವರಾದ ಶ್ರೀ ಕೆ. ಆರ್. ಜಯತೀರ್ಥ ಅವರಿಗೆ, ಹಾಗೂ ಸುಪ್ರಸಿದ್ಧ ವಿದ್ವಾಂಸರಾದ ಶ್ರೀ ಡಿ ಪ್ರಹ್ಲಾದಾಚಾರ್ಯರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ನೀವೆಲ್ಲಾ ಈ ಕೃತಿಯನ್ನು ಓದುತ್ತಿದ್ದೀರಿ, ನಿಮ್ಮ ಅಭಿಮಾನಕ್ಕೆ ನನ್ನ ವಿನಮ್ರ ನಮನಗಳು.

12–2–89
ಬೆಂಗಳೂರು

**ಅರಳುಮಲ್ಲಿಗೆ ಪಾರ್ಥಸಾರಥಿ**
194, ಲಕ್ಷ್ಮೀ ನಿಲಯ
ರಾಘವೇಂದ್ರ ಕಾಲೋನಿ, ಚಾಮರಾಜಪೇಟೆ
ಬೆಂಗಳೂರು-18.

## ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ

ಭಾರತೀಯ ಧಾರ್ಮಿಕ ಇತಿಹಾಸದ ವರ್ಣರಂಜಿತ ಬಾನಿನಲ್ಲಿ ಕಾಮನ ಬಿಲ್ಲಾಗಿ ಕಂಗೊಳಿಸಿದ ಮಧ್ವಾಚಾರ್ಯರೇ ಹರಿದಾಸ ಸಾಹಿತ್ಯದ ಪ್ರೇರಕಶಕ್ತಿ. ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡು ಮುಕ್ತಿ ಪಡೆಯಬಹುದೆನ್ನುವ ಮಹಾನ್ ವಿಶ್ವಾಸವನ್ನು ಸಜ್ಜನ ಸಮುದಾಯಕ್ಕೆ ಅವರು ಮೂಡಿಸಿದರು. ನಾವು ದಿನನಿತ್ಯ ಉಸಿರಾಡುತ್ತ ಅನುಭವಿಸುತ್ತಿರುವ ಈ ಜಗತ್ತನ್ನು ಸುಳ್ಳೆಂದು ತಿರಸ್ಕರಿಸದ, ಮಾಯೆಯೆಂದು ಭ್ರಮಿಸದೆ ಸತ್ಯವೆಂದು ನೇರವಾಗಿ ನಂಬಿ ಸಾಧಿಸಿದವರು. ಇಡೀ ಜಗತ್ತಿನ ಈ ವಾಸ್ತವಿಕತೆಯನ್ನು ಸ್ವತಂತ್ರ ಹಾಗೂ ಪರತಂತ್ರ ಎಂಬ ವ್ಯವಸ್ಥೆಯಾಗಿ ರೂಢಿಸಿದವರು. ಪರಮಾತ್ಮನೊಬ್ಬನೇ ಸ್ವತಂತ್ರ, ಉಳಿದುದೆಲ್ಲವೂ ಪರಾಧೀನ ಸತ್ಯ ಎಂಬ ದ್ವೈತ ಜ್ಞಾನವನ್ನು ಅಮೃತವಾಹಿನಿಯಂತೆ ಅನಂತವಾಗಿ ಪ್ರವಹಿಸಿದವರು.

ಆಚಾರ್ಯ ಮಧ್ವರು ಭಕ್ತಿಯ ಶ್ರೇಷ್ಠತೆಯನ್ನು ಎತ್ತಿ ಹಿಡಿದು ಮೂಢ ನಂಬಿಕೆಗಳ ಮಾಯಾಜಾಲದಿಂದ ಅದನ್ನು ಮುಕ್ತಗೊಳಿಸಿದರು. ಪರಮಾತ್ಮನ ಮಹಿಮೆಯ ಪರಿಪೂರ್ಣ ಅರಿವನ್ನು ಆಧರಿಸಿದ ದೃಢನಂಬಿಕೆ ಹಾಗೂ ಪ್ರೇಮವೇ ಭಕ್ತಿ ಎಂದು ಒತ್ತಿ ಹೇಳಿ ಭಕ್ತಿಯನ್ನು ಅತಿಭಾವುಕತೆ ಹಾಗೂ ಶೃಂಗಾರದಂತಹ ಶೃಂಖಲೆಗಳಿಂದ ಬಿಡುಗಡೆ ಮಾಡಿದರು. ಉಡುಪಿಯಲ್ಲಿ ಕೃಷ್ಣನನ್ನು ಪ್ರತಿಷ್ಠಾಪಿಸಿ ಗೋವೆಯಲ್ಲಿ ವೈಷ್ಣವ ಸಿದ್ಧಾಂತವನ್ನು ಪ್ರಚಾರ ಮಾಡಿ, ಬಂಗಾಲದಲ್ಲಿ ತಮ್ಮ ಪ್ರಭಾವ ಹರಡಿ ರಾಷ್ಟ್ರದೆಲ್ಲೆಡೆ ಲಕ್ಷಲಕ್ಷ ಶಿಷ್ಯ ಸಂಪತ್ತನ್ನು ಪಡೆದುಕೊಂಡ ಮಧ್ವಾಚಾರ್ಯರು ಭಾರತೀಯ ಆಚಾರ ವಿಚಾರ ಗಳಿಗೆ ಸಾತ್ವಿಕ ಬುನಾದಿಯನ್ನು ಹಾಕಿಕೊಟ್ಟರು. ಮಧ್ವಾಖ್ಯಂ ಮಂತ್ರ ಸಿದ್ಧಂ' ಎನ್ನುವಂತೆ ಮಹಾಮುನಿಗಳಾಗಿ ಮುಂದೆ ಸಹಸ್ರಾರು ವರ್ಷಗಳ ಕಾಲ ಉಳಿಯಬಲ್ಲ ಮೌಲಿಕವಾದ ಅನೇಕ ಧಾರ್ಮಿಕ ಸಾಂಸ್ಕೃತಿಕ ಕೊಡುಗ

ಗಳನ್ನು ಮಧ್ವಾಚಾರ್ಯರು ಮುಂದಿನ ಜನಾಂಗಕ್ಕೆ ನೀಡಿದರು ಅವರಲ್ಲಿ ಅಪೂರ್ವವಾದ ಮಹತ್ವವಾದ ಕೊಡುಗೆಯೆಂದರೆ, ಹರಿದಾಸ ಸಾಹಿತ್ಯ ಪ್ರೇರಣೆ

ದಾಸ ಸಾಹಿತ್ಯದ ನಿಜವಾದ ಉಗಮ ಋಗ್ವೇದದಲ್ಲಿ ವೇದಯುಗದ ಮಹಾಮುನೀಷಿಗಳು ಋಗ್ವೇದದ ವಿಷ್ಣು ಸೂಕ್ತ, ಇಂದ್ರಸೂಕ್ತ, ಅಗ್ನಿಸೂಕ್ತ ಗಳಲ್ಲಿ ಪರಮಾತ್ಮನನ್ನು ಕುರಿತು ಭಕ್ತಿಭಾವ ಪರವಶರಾಗಿ ದಾಸ್ಯಭಾವ ತುಂಬಿ ಸ್ತುತಿಸಿದ್ದಾರೆ ಭಾಗವತದ ಭಕ್ತಿಯೋಗವಂತೂ ಪ್ರಹ್ಲಾದರ ನವವಿಧ ದಾಸ್ಯ ತತ್ವದ ನಿರೂಪಣೆಯ ನಿದರ್ಶನ "ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ ’

## ದ್ವಾದಶ ಸ್ತೋತ್ರ

ಸರ್ವಜ್ಞ ಸಿದ್ಧಾಂತದ ಸಾರ್ಥಕ ಸಮರ್ಥರಾದ ಶ್ರೀ ಮಧ್ವಾಚಾರ್ಯರು "ಸೋಽಹಂ" ಭಾವವನ್ನು ಖಂಡಿಸಿ, 'ದಾಸೋಽಹಂ' ಎಂಬ ದಾಸ ತತ್ವವನ್ನು ಜಗತ್ತಿಗೆ ಸಾರಿದಂದಿನಿಂದಲೇ ದಾಸ ಸಾಹಿತ್ಯಕ್ಕೆ ದಾರಿ ಸ್ಪಷ್ಟವಾಯಿತು ತಮ್ಮ ದ್ವಾದಶಸ್ತೋತ್ರದ ಭವಮಮಶರಣಂ' 'ಪ್ರಣಯಾಮೋ ವಾಸುದೇವಂ' ಸಾಲುಗಳಲ್ಲಿ ಭಗವದ್ಭಕ್ತಿಯನ್ನು ಸಾದರಪಡಿಸಿ ಆಚಾರ್ಯ ಮಧ್ವರು ದಾಸ ಸಾಹಿತ್ಯದ ಭವ್ಯಭವಿತವ್ಯಕ್ಕೆ ನಾಂದಿ ಹಾಡಿದ್ದಾರೆ "ಭಕ್ತಿ ಮಾರ್ಗವು ಎಷ್ಟೋ ಹಿಂದಿನಿಂದ ಇದ್ದಿತಾದರೂ ಅದು ಕರ್ನಾಟಕದಲ್ಲಿ ಪೃಥವಾಗಿ ಬೇರೂರಿ ಸಾಹಿತ್ಯ ರೂಪದಿಂದ ಸರ್ವತ್ರ ಹಬ್ಬಿಕೊಂಡಿದ್ದು ದ್ವೈತ ಸಿದ್ಧಾಂತವನ್ನು ಮಧ್ವಾಚಾರ್ಯರು ಪ್ರತಿಪಾದಿಸಿದಂದಿನಿಂದಲೇ ಆ ತತ್ವದ ಸ್ಫೂರ್ತಿಯಿಂದಲೇ ಕನ್ನಡ ನಾಡಿನಲ್ಲಿ ಹರಿದಾಸರ ಕೂಟ ಹುಟ್ಟಿತು [1] ಹರಿದಾಸ ಸಾಹಿತ್ಯ ನಿರ್ಮಾಣಕ್ಕೆ ಮೂಲಭೂತವಾಗಿ ದ್ವಾದಶ ಸ್ತೋತ್ರ ಮೂಲ ಪ್ರೇರಣೆಯಾಗಿ ಒದಗಿ ಬಂದಿತು

---

1 ಶ್ರೀ ಪುರಂದರದಾಸರೂ ಭಕ್ತಿ ಮಾರ್ಗವೂ (ಎಂ ಗೋವಿಂದಪ್ಪ) 1964 ಪುರಂದರದಾಸರ 4ನೇ ಶತಮಾನೋತ್ಸವ ಸಂಚಿಕೆ

ದಾಸಸಾಹಿತ್ಯ ಗುರುಮಧ್ವರಿಂದ ಗೀತಗತಿ ಪಡೆಯಿತು ನರಹರಿ ತೀರ್ಥರಿಂದ ನಾದಸುಧೆಯಾಯಿತು ಶ್ರೀ ಪಾದರಾಜರಿಂದ ಕನ್ನಡ ಪದಪದ್ಯ ಪ್ರಾಸಾದಗೇಯತೆಯಾಗಿ ಹರಿಯತೊಡಗಿತು ವ್ಯಾಸರಾಯರಿಂದ ಪ್ರವರ್ತಿತವಾದ ದಾಸ ಕೂಟದ ಸುಸಂಘಟಿತ ಕವಲುಗಳಲ್ಲಿ ವೇದವೇದಾಂತಾದಿ ದರ್ಶನಗಳನ್ನು ದಾಸಯ್ಯನ ಮಾತುಗಳಲ್ಲಿ ಕನ್ನಡದ ಜನಮನಕ್ಕೆ ಮುಟ್ಟಿಸಿತು ಪುರಂದರದಾಸರಂತಹ ಪುಣ್ಯ ಪುರುಷರಿಂದ ಪ್ರಬುದ್ಧ ಪಾತ್ರ ಪಡೆಯಿತು ವಿಜಯದಾಸರಿಂದ ವ್ಯಾಪಕವಾದ ತಾತ್ವಿಕ ಸಾತ್ವಿಕ ಯಶಸ್ಸು ಸಾಧಿಸಿತು ಗೋಪಾಲದಾಸರಿಂದ ಗಾಂಭೀರ್ಯ ಮಾಧುರ್ಯಗಳ ಭಕ್ತಿ ಪುಳಕವಾಗಿ ತುಳುಕಿತು ಜಗನ್ನಾಥದಾಸರಿಂದ ಜಗತ್ತಿನ ಜಯಪ್ರದ ಸಾಹಿತ್ಯಗಳೆತ್ತರದ ತುತ್ತತುದಿಗೆ ಮುಟ್ಟಿ ಜನಸಾಮಾನ್ಯರ ಮನೆಮನೆಗಳಲ್ಲಿ ಹೃದಯದ ಹೊಲಗಳಲ್ಲಿ ನಿರಂತರ ಹರಿದುಬಂದ ಪರಮ ಪವಿತ್ರ ಭಕ್ತಿ ಭಾಗೀರಥಿಯಾಯಿತು ಕನ್ನಡ ಹರಿದಾಸ ಸಾಹಿತ್ಯ

ಭಗವಂತನ ಸಾಕ್ಷಾತ್ಕಾರಕ್ಕೆ ಏಕಮೇವ ಯುಕ್ತಿಯೆಂದರೆ ಭಕ್ತಿಯೊಂದೇ ಇದೇ ದಾಸ ಸಿದ್ಧಾಂತ ಭಗವದ್ಗೀತೆಯಲ್ಲಿ ಕೃಷ್ಣಾಮೃತವರ್ಷಿಣಿಯಾಗಿ ಮೈತಳೆದ ಈ ಭಕ್ತಿ ಭಾಗೀರಥಿ ಮಧ್ಯಯುಗದಲ್ಲಿ ಭಾರತದಲ್ಲೆಲ್ಲಾ ಉತ್ತರೋತ್ತರ ಹರಿದು ಹರಿದಾಸ ಸಾಹಿತ್ಯದ ಮೂಲಕ ಕನ್ನಡ ಜನ ಜೀವನವನ್ನು ಪಾವನ ಮಾಡಿದ ಧನ್ಯ ಶಕ್ತಿಯಾಯಿತು

ಶ್ರೀ ಹರಿಯು ಸರ್ವೋತ್ತಮನು ಅಚಿಂತ್ಯಾದ್ಭುತ ಶಕ್ತನು ಜಗತ್ತು ಸತ್ಯವಾದುದು ಭೇದವು ಪಾರಮಾರ್ಥಿಕ ಸತ್ಯ ಮತ್ತು ನಿತ್ಯ ಸಕಲ ಜೀವರೂ ಶ್ರೀ ಹರಿಯ ಅನುಚರರು ಸ್ವರೂಪ ಸುಖಾನುಭವವೇ ಮುಕ್ತಿ ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನ ಪ್ರತ್ಯಕ್ಷ, ಅನುಮಾನ ಆಗಮಗಳು ಸಾಧಕ ಪ್ರಮಾಣಗಳು ಇವು ಆಚಾರ್ಯ ಮಧ್ವರ ತತ್ವಗಳು ಈ ತತ್ವಗಳೇ ದಾಸ ಸಿದ್ಧಾಂತದ ಪ್ರಣಾಳಿಕೆಯಾದವು "ಕನ್ನಡ ಹರಿದಾಸ ಸಾಹಿತ್ಯಕ್ಕೆ ಮಧ್ವ ಸಿದ್ಧಾಂತ, ತಲಕಾವೇರಿಯಿದ್ದಂತೆ" [1]

---

1 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ"–ಡಾ|| ಎಚ್ ತಿಪ್ಪೇರುದ್ರಸ್ವಾಮಿ, ಪು 358

## ದಾಸಭಾವದ ಪ್ರಭಾವ

ಇದು ಇಂದು ನಿನ್ನೆಯ ಕಥೆಯಲ್ಲ. ರಾವಣನ ಆಸ್ಥಾನದಲ್ಲಿ ಹನುಮಂತನನ್ನು ನೀನು ಯಾರೆಂದು ಕೇಳಿದೊಡನೆಯೇ 'ದಾಸೋಽಹಂ ಕೋಸಲೇಂದ್ರಸ್ಯ' ಎಂದು ಉತ್ತರಿಸಿದ ದಿನದಿಂದಲೂ ನಿಜವಾದ ಭಕ್ತರಿಗೆ 'ಸೋಽಹಂ' ಎನ್ನುವಲ್ಲಿ ಸ್ವಲ್ಪವೂ ಆಸಕ್ತಿಯಿಲ್ಲ. ಮಹಾರಾಷ್ಟ್ರದ ಅತ್ಯಂತ ಸುಪ್ರಸಿದ್ಧ ಭಕ್ತಕವಿ ಸಂತ ತುಕಾರಾಮನೇ 'ಅಪ್ಪೈ ತಿತೋ ಮುರ್ಝೋ ನಾಹಿ ಸಮಾಧಾನ ಗೋಡ ಹೇ ಚರಣಸೇವಾ ತುಝೀ' ಎಂದಿದ್ದಾನೆ. ಇದೇ ರೀತಿ 'ಮಧ್ವಾಚಾರ್ಯರ ಭಾಗವತ ಧರ್ಮ ವಿಚಾರವು ಬಂಗಾಲದ ಚೈತನ್ಯರನ್ನೂ ಮಹಾರಾಷ್ಟ್ರದ ಜ್ಞಾನೇಶ್ವರರನ್ನು ಪ್ರಭಾವಿಸಿತು. ಕರ್ನಾಟಕದ ಈ ಭಾಗವತ ಭಕ್ತಿಯೇ ಮಹಾರಾಷ್ಟ್ರದಲ್ಲಿ ಸಂತರಾದ ತುಕಾರಾಮ್ ಏಕನಾಥ್, ನಾಮದೇವ್ ಮೊದಲಾದ ಸಂತ ಕವಿಗಳಿಗೆ ಸ್ಫೂರ್ತಿ, ಪ್ರೇರಣೆ ನೀಡಿತು. ಮುಂದೆ ವಲ್ಲಭಾಚಾರ್ಯರು ಗೋಸ್ವಾಮಿಯವರೂ ಮಧ್ವಾಚಾರ್ಯರ ವೈಚಾರಿಕ ಪ್ರಭೆಯಿಂದ ಬೆಳಗಿದರು. ಮಹಾರಾಷ್ಟ್ರದ ಭಾಗವತರಿಗೆ ಹರಿದಾಸರ ಕಣ್ಮಣಿ ವಿಠ್ಠಲನ ಪಂಢರಪುರವೇ ಪುಣ್ಯಕ್ಷೇತ್ರವಾಯಿತು. [1]

ಮಧ್ವಾಚಾರ್ಯರ ಪ್ರಭಾವದ ಪ್ರವಾಹ ದೇಶೋವಿಶಾಲ ಹರಡಿ ಶಾಖೋಪಶಾಖೆಗಳಾಗಿ ಬೆಳೆಯತೊಡಗಿತು. ಅವರಲ್ಲೂ ಬಂಗಾಳ, ಮಹಾರಾಷ್ಟ್ರಗಳಲ್ಲಿ ಅವರ ಪ್ರಭಾವ ತೀವ್ರವಾಯಿತು. "ಶ್ರೀ ಜ್ಞಾನೇಶ್ವರ್, ಶ್ರೀ ನಾಮದೇವ್, ಶ್ರೀ ಏಕನಾಥ್, ಶ್ರೀ ತುಕಾರಾಮ್, ಶ್ರೀ ರಾಮದಾಸ್ ಈ ಐವರು ಸಾಧುಗಳನ್ನು ಮಹಾರಾಷ್ಟ್ರದ ಸಾಧು ಪಂಚಾಯತನ ಎಂದು ಕರೆಯುತ್ತಾರೆ. ಇವರೆಲ್ಲರೂ ಮಧ್ವಾಚಾರ್ಯರು ಪ್ರಚುರಪಡಿಸಿದ ಭಾಗವತದ ಮೇಲ್ಮೆಯನ್ನು ಎತ್ತಿ ಹಿಡಿದರು. [2]

---

1 'ಕವಿ–ಕಾವ್ಯ ಪರಂಪರೆ—ದಾಸಸಾಹಿತ್ಯ"—ಎನ್ಕೆ ಕುಲಕರ್ಣಿಯವರ ಲೇಖನ-ಪು 13

2 'ಕವಿ–ಕಾವ್ಯ ಪರಂಪರೆ—ದಾಸಸಾಹಿತ್ಯ'—ಎನ್ಕೆ ಕುಲಕರ್ಣಿಯವರ ಲೇಖನ-ಪು 19

## ಜನಸಾಮಾನ್ಯರ ಉದ್ಧಾರಕ ಶಕ್ತಿ ಹರಿದಾಸ ಸಾಹಿತ್ಯ

ಹರಿದಾಸರ ಪದಪದ್ಯಗಳು ಸಾಧಕನ ಮಾರ್ಗದ ದಾರಿದೀಪಗಳು ಸಾಮೂಹಿಕ ಬದುಕಿನ ಜೀವಂತ ಶಕ್ತಿಯಾಗಿ, ತಮ್ಮ ಅನುಭವಸಿದ್ಧ ಬೆಳಕಿನ ಮೂಲಕ ಪಾಮರರನ್ನು ಅನುಭಾವದ ಎತ್ತರ ಬಿತ್ತರಗಳಿಗೆ ಕರೆದೊಯ್ಯಬಲ್ಲ ಪ್ರಜ್ಞಾಪುಂಜ ದಾಸಸಾಹಿತ್ಯ. ಯುಗ ಯುಗಗಳಿಂದ ಸಂಸ್ಕೃತಭೂಯಿಷ್ಠವಾಗಿ ಕಷ್ಟಕ್ಲಿಷ್ಟವಾಗಿದ್ದ ಗಾಢಗೂಢ ಪ್ರಮೇಯ ಪ್ರಕ್ರಿಯೆಗಳನ್ನು, ಶಾಸ್ತ್ರ ವಿಚಾರಗಳನ್ನು ಕಂಡು ಬೆದರಿ ದೂರ ಸರಿದು ನಿಂತಿದ್ದ ಜನಸಾಮಾನ್ಯರನ್ನು ಭಕ್ತಿ ಪ್ರವಾಹಕ್ಕೆ ಎಳ ತಂದು ಕನ್ನಡದ ಸುಲಭ ಸರಳ ಕೀರ್ತನೆಗಳ ಮೂಲಕ ಜ್ಞಾನಾಮೃತದ ಗುಟುಕುಗಳನ್ನು ಕುಡಿಸಿ ಜ್ಞಾನದ ಬೆಳಕಿನಲ್ಲಿ ನಡದು ಅವರೆಲ್ಲಾ ಸಜ್ಜನರಾಗುವಂತೆ ಮಾಡಿದವರು ಹರಿದಾಸರು. ಜನಸಾಮಾನ್ಯರಲ್ಲಿ, ಯುವಕರಲ್ಲಿ ಸ್ತ್ರೀಯರಲ್ಲಿ, ಕಡಗೆ ಪಾತಕಿಗಳಲ್ಲೂ ಕೂಡ ಭಗವಂತನನ್ನು ಕಾಣುವ ತವಕ ಹಂಬಲವನ್ನು ಮೊಳಸಿ ಬೆಳೆಸಿದವರು ಶ್ರೇಷ್ಠ ಪರಂಪರೆಯ ಹರಿದಾಸರು.

'ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿ ನೆನೆವಂತ ಸೌಭಾಗ್ಯವಿರಲಿ' ಎನ್ನುವ ದಾಸ ಸಾಹಿತ್ಯ ಲೌಕಿಕ ಬಿಟ್ಟು ಓಡಿ ಹೋಗಲಿಲ್ಲ. 'ಈಸಬೇಕು ಇದ್ದು ಜೈಸಬೇಕು' ಎಂದು ಧೈರ್ಯ ತುಂಬಿ 'ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬ್ಯಾಡಿ ಹುಚ್ಚಪ್ಪಗಳಿರಾ' ಎಂದು ಹೇಳಿ ಮಾನವ ಜೀವನದ ಸಾರ್ಥಕತೆಯನ್ನು ತಿಳಿಸಿ 'ಫಲವಿದು ಬಾಳ್ದುದಕೆ' ಎಂಬುವನ್ನು ಅದು ಮನನ ಮಾಡಿ ಕೊಟ್ಟಿತು.

ದಾಸರು ನುಡಿದದ್ದೆಲ್ಲಾ ನಾರಾಯಣನ ಕೀರ್ತನೆ. ನಡೆದದ್ದೆಲ್ಲಾ ತೀರ್ಥಯಾತ್ರೆ. ಸಕಲ ಕರ್ಮಗಳೂ ಹರಿಸೇವೆಗೇ ಮೀಸಲು. ದಾಸರಿಗೆ ಭಗವಂತನೇ ಗತಿ. ಅವನೇ ಅವರ ಮತಿ, ಭಗವತ್ಪ್ರೀತಿಯ ಅಪೇಕ್ಷೆ. ಉಳಿದುದೆಲ್ಲಕ್ಕೂ ಉಪೇಕ್ಷೆ. ಮದ ಮತ್ಸರಗಳ ಬಾಳು ನಿರರ್ಥಕ. ಹರಿಸ್ಮರಣೆಯ ಬದುಕೇ ಸಾರ್ಥಕ. ಇದೇ ದಾಸರ ನಿಲುವು. ಇದರಲ್ಲೇ ದಾಸರಿಗೆ ಒಲವು.

## ಭಕ್ತಿರಥದಲ್ಲಿ ಮುಕ್ತಿಪಥದತ್ತ

ದಾಸರ ಮತ ಭಕ್ತಿಯ ಪಥ. ಅರ್ಥಪರಿತ ಕರ್ಮವೇ ಅವರ ಸಾಧನೆಯ ಮರ್ಮ. ನಾಡಿನ ನಾಡಿಯ ಜಾಡನ್ನು ಹಿಡಿದು ಗಾಢವಾಗಿ

ಮಿಡಿದ ಮಹನೀಯರು ಮೂರ್ತಿಗಳು ಪಾವನಕೀರ್ತಿಗಳು ಕರ್ನಾಟಕದ ಹರಿದಾಸರು ಭಗವಂತನಲ್ಲಿ ಭಕ್ತಿ ಇವರ ಸಾಧನೆಯ ಕೇಂದ್ರಬಿಂದು ಸಿಂಧುಶಯನನನ್ನು ಭಜಿಸುವ ತಪಸ್ವಿ ನೀವ ದಾಸರ ದೃಷ್ಟಿಯಲ್ಲಿ ಬಿಂದು ಗಂಗೋದಕ ಮಾತ್ರ ಎಂದೆಂದಿಗೂ ಇಂದಿರಾರಮಣ ಒಂದೂದಗುವನೆನ್ನುವ ವಿರಲ ಪ್ರಿಯರು ಹರಿದಾಸರು ಬಿಂಬರೂಪಿ ಪರಮಾತ್ಮ ಬಿಂಬನಲ್ಲಿ ವ್ಯಾಪ್ತನಾದಾಗ ಅಂಕಿತಪ್ರದಾನ ವಿಠಲ ಅಂಕಿತವೇ ಹರಿದಾಸರಿಗೆ ಪ್ರಧಾನ ಪುರಂದರ ದಾಸರ ಉಪಾಸ್ಯಮೂರ್ತಿ ಪಂಢರಪುರದ ವಿಠಲ ಇವನು ನಾದಬ್ರಹ್ಮ ದಾಸಪ್ರಿಯ ಪ್ರಭುಗಳ ಕಣ್ಮಣಿ ತಿರುಪತಿಯ ಶ್ರೀನಿವಾಸ ಇವನು ಕಾಂಚನ ಬ್ರಹ್ಮ ಉಡುಪಿಯ ಕುಣಿಕುಣಿಯುವ ಕಡೆಗೋಲು ಕೃಷ್ಣ ಅನ್ನಬ್ರಹ್ಮ ದಾಸರ ದೃಷ್ಟಿಗೆ ದಿವ್ಯ ಆನಂದ ತುಂಬಿದ ದೇವರದೇವ ಈ ಮುದ್ದು ಬಾಲಕೃಷ್ಣ ಶ್ರೀಕೃಷ್ಣ ನಾಮಗಾನಪ್ರಿಯ ಭಗವತ್ಪ್ರೀತಿಕರವಾದ ಗಾನದಲ್ಲಿ ಲೀನರಾದವರು ಹರಿದಾಸರು ಶ್ರೀಕೃಷ್ಣನ ತುಂಟ ಮಂದಹಾಸ, ವಿಠಲನ ಮಿಂಚುವ ಮುಗುಳ್ನಗೆ, ಶ್ರೀನಿವಾಸನ ಭವ್ಯಮೂರ್ತಿ ಹರಿದಾಸರ ಹಾಡುಗಳಿಗೆ ಅನುಗ್ರಹಧಾರೆಯಾದುವು

“ನಾಹಂ ವಸಾಮಿ ವೈಕುಂಠೇ ನಯೋಗಿ ಹೃದಯೇ ರವೌ
ಮದ್ಭಕ್ತಾ ಯತ್ರಗಾಯಂತೇ ತತ್ರತಿಷ್ಠಾಮಿ ನಾರದ”

ಭಗವಂತನು ವೈಕುಂಠದಲ್ಲಿ ವಾಸಮಾಡುವುದಿಲ್ಲವೆಂದಲ್ಲ, ಯೋಗಿಗಳ ಹೃದಯದಲ್ಲಿ ವಾಸಮಾಡುವುದಿಲ್ಲವೆಂದಲ್ಲ ಭಗವದ್ಭಕ್ತರು ಎಲ್ಲಿ ಗಾನ ಮಾಡುವರೋ ಅಲ್ಲಿ ನಾನು ವಿಶೇಷ ಸನ್ನಿಧಾನದಿಂದ ವಾಸಮಾಡುತ್ತಿರುತ್ತಾನೆ ಅಂತಹ ಪರಮ ಭಗವದ್ಭಕ್ತರು ಪರಮಾತ್ಮನನ್ನು ಕೊಂಡಾಡಿ ಹಾಡಿದ ಗಾನಾಮೃತವೇ ಹರಿದಾಸ ಸಾಹಿತ್ಯ ದಾಸರು ಎಲ್ಲಿದ್ದರೂ ಹೇಗಿದ್ದರೂ ಭಗವಂತನ ಚಿಂತನೆಯಲ್ಲಿಯೇ ಇರುತ್ತಾರೆ ಇದ್ದೂ ಇರದಂತಿರುತ್ತಾರೆ ಅರಿತೂ ಅರಿಯದಂತಿರುತ್ತಾರೆ ಮೂಕರಂತೆ ಕಾಣಿಸುತ್ತಾರೆ ಇದ್ದಕ್ಕಿದ್ದಂತೆಯೇ ಅಳುತ್ತಾರೆ ನಗುತ್ತಾರೆ ನಕ್ಕು ನಲಿಯುತ್ತಾರೆ, ಹಿಗ್ಗಿ ಹಾಡುತ್ತಾರೆ ಹಾಡಿ ಕುಣಿಯುತ್ತಾರೆ ಇಂತಹ ಆನಂದ ಭಗವದಾಸ್ವಾದ ಅನಂತ ಜನ್ಮಗಳ ಸಾಧನೆಯ ಫಲ ಆ ಫಲದ ರಸರೂಪವೇ ಹರಿದಾಸ ಸಾಹಿತ್ಯ

ಜೀವನವನ್ನು ಅತ್ಯಂತ ಆಪ್ತವಾಗಿ ಅರ್ಥಮಾಡಿಕೊಂಡ ಅನುಭವಿಗಳು, ಅನುಭಾವಿಗಳು, ಅಪರೋಕ್ಷ ಜ್ಞಾನಿಗಳು ಹರಿದಾಸರು ಇಪ್ಪತ್ನಾಲ್ಕು ತತ್ತ್ವಗಳಿಂದ ಕೂಡಿರುವ ದೇಹದ ಮೇಲಿನ ಅಭಿಮಾನದ ಅನುಸಂಧಾನ ದಾಸರ ತತ್ತ್ವಗಳ ಪ್ರವಿಷ್ಟ, ಹಿಗ್ಗುವ, ಬಗ್ಗುವ, ತಗ್ಗುವ, ಸೆಗ್ಗುವ, ಕುಗ್ಗುವ, ಮುಗ್ಗುವ ಕಡಗ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ಈ ಮಾನವ ದೇಹದ ಮೇಲೆ ಅಸಗತ್ಯ ಮಮಕಾರ ಇಟ್ಟಿರುವವರ ಒಳಗಣ್ಣು ತೆರೆಸುವ ದಾಸರು “ಕಣ್ಣಿನೊಳಗ ನೋಡು ಹರಿಯ, ಒಳಗಣ್ಣಿನಿಂದಲಿ ನೋಡು ಮೂಜಗ ಘೋರಯ ಎಂದು ಅಂತರಂಗದ ಬಾಗಿಲನ್ನು ತಟ್ಟಿ ನಿದ್ರೆಯ ನಿಶೆಯಲ್ಲಿರುವ ಪಾಮರರನ್ನು ಎಚ್ಚರಿಸುತ್ತಾರ

‘ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ।
ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ”1

ಜಗದಂತನ ನಾಮಸ್ಮರಣೆಯೊಂದಕ್ಕೇ ಪಾಪ ಪರಿಹಾರಮಾಡಲು ಎಷ್ಟು ಸಾಮರ್ಥ್ಯವಿದೆಯೋ ಅಷ್ಟು ಪಾಪಗಳನ್ನು ಮಾಡಲು ಎಂತಹ ಪಾಪಿಗಳಿಗೂ ಸಾಮರ್ಥ್ಯವಿಲ್ಲ. ಇದನ್ನೇ ದಾಸರು “ಹರಿಸ್ಮರಣೆ ಮಾಡೋ ನಿರಂತರ ಪರಗತಿಗಿದು ನಿರ್ಧಾರ” ಎಂದು ಹೇಳಿ ‘ಕಲಿಯುಗದಲಿ ನಿನ್ನ ನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವುವೋ ರಂಗಾ’ ಎಂದು ಯಜ್ಞ ಯಾಗ ತಪವನ್ನನ್ನು ಮಾಡಲಾಗದ ಜನಸಾಮಾನ್ಯರಿಗೆ ಕೇವಲ ನಾಮಸ್ಮರಣ, ಭಕ್ತಿರಥದ ಮೂಲಕ ಮುಕ್ತಿಪಥ ಹಿಡಿಸುತ್ತದ ಎನ್ನುತ್ತಾ ‘ದಾರಿಯಾವುದಯ್ಯಾ ವೈಕುಂಠಕೆ’ ಎನ್ನುವವರಿಗಲ್ಲಾ ಅಲ್ಲಿದ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ’ ಎಂದು ‘ಒಂದೇ ಕೂಗಳತೆ’ಯ ವೈಕುಂಠಕ್ಕೆ ದಾರಿ ತೋರಿಸುತ್ತಾರೆ

ಸರ್ವದೇಶವು ಪುಣ್ಯದೇಶವು, ಸರ್ವಕಾಲವು ಪರ್ವಕಾಲವು, ಸರ್ವಜನರು ದಾಸಪಾತ್ರರು, ಸರ್ವಮಾತುಗಳೆಲ್ಲ ಮಂತ್ರವು, ಸರ್ವಕೆಲಸಗಳೆಲ್ಲ ಪೂಜೆಯು,ಸದಾ ಪರಮಾತ್ಮನ ಧ್ಯಾನ ಮಾಡುವವರಿಗೆ ಎಂದು ಹೇಳುವ ದಾಸರು

---

1 ಮಧ್ವಾಚಾರ್ಯರ “ಕೃಷ್ಣಾಮೃತ ಮಹಾರ್ಣವ”

ಎಲ್ಲರಿಗೂ ಮಾನಸ ಪೂಜೆಯ ಮಹತ್ವವನ್ನು ತಿಳಿಸುತ್ತಾರೆ. 'ಸ್ನಾನವ ಮಾಡಿರೋ ಜ್ಞಾನತೀರ್ಥದಲಿ ನಾನು ನೀನೆಂಬಹಂಕಾರದ ಬಿಟ್ಟು' ಎನ್ನುವ ದಾಸರು ನಾರಾಯಣನೆಂಬ ನಾಮದ ನಿಮ್ಮ ನಾಲಗೆ ತುದಿಯಲ್ಲಿ ಬಿತ್ತಿರಯ್ಯಾ ಎಂದು ಕರೆ ನೀಡುತ್ತಾರೆ. ದಾಸರಿಗೆ ಗೊತ್ತು ನಾಮಸ್ಮರಣೆಯ ಮಹತ್ವ "ದಾರಿಯೊಳ್ಳೆದ ಧಾರುಣಿಸುರರಿಗೆ ನಾರಾಯಣಸ್ಮರಣೆಗ ಸರಿಯುಂಟೇ. ದಾಸರು ಇದನ್ನು ಹೇಳುವಾಗ ಕಂಡದ್ದಾದರೂ ಏನು ? "ಬಟ್ಟದಂಗ ದುರಿತವು ಸುತ್ತಮುತ್ತಲೊಟ್ಟಿರೆ ಕೃಷ್ಣನಾಮದ ಕಿಡಿಬಿದ್ದು ಬೆಂದುಹೋದದ್ದು ಕಂಡ

## ಅಮೃತವಾಹಿನಿ

ಹರಿದಾಸರ ಕಾವ್ಯ ಶಕ್ತಿ ಅನನ್ಯವ. ಅವರ ಪ್ರತಿಭ ಗೌರೀಶಂಕರ ನಷ್ಟು ವಸ್ತುಗಳನ್ನು ಕಾವ್ಯಕ್ರಿಯೆಗೆ ಒಗ್ಗಿಸುವ, ಒಗ್ಗಿಸುವ ಹದಗಾರಿಕೆ ಅವರಲ್ಲಿದ ಅತಿಸೂಕ್ಷ್ಮ ಕಾವ್ಯ ಸೃಷ್ಟಿಸುವ ಕಲೆಗಾರಿಕ ಅವರಲ್ಲಿದೆ. ಇಡೀ ಕಾವ್ಯಕ್ಕೆ ಆಧ್ಯಾತ್ಮಿಕ ತಿರುವಿನ ಮೂಲಕ ಶಾಶ್ವತ ಮೌಲ್ಯ ನೀಡಬಲ್ಲ ಅಲೌಕಿಕ ಶಕ್ತಿ ಹರಿದಾಸರದು. 'ತಾನು ಬಾರಿಸುತಿದ ಹರಿದಾಸರೆಲ್ಲಾ ಕೇಳಿ' 'ಕಾಗದ ಬಂದಿದೆ ನಮ್ಮ ಕಮಲನಾಭನದು' "ಎಪ್ಪತ್ತಾರ ಮೆಣಸಿನಕಾಯಿ' 'ಹೊಡೀ ನಗಾರಿ ಮೇಲೆ ಕೈಯ' "ರಾಗಿಯ ತಂದೀರಾ' "ಕಲ್ಲು ಸಕ್ಕರೆ ಕೊಳ್ಳಿರೋ" ಹೀಗೆಯೇ ದಾಸರ ಸೂಕ್ಷ್ಮತೆ ತಮ್ಮ ಸುತ್ತಮುತ್ತಣ ಎಲ್ಲಾ ವಸ್ತುಗಳಲ್ಲೂ ಹಾಡಾಗಿ ಹರಡಿಕೊಳ್ಳುತ್ತದ.

ಹರಿದಾಸರ ವೇಣುಗೀತೆ, ಭ್ರಮರಗೀತ, ಗೋಪಿಯರ ವಿರಹಗೀತೆ, ಬಾಲಕೃಷ್ಣನ ತುಂಟಾಟಗಳು, ದಾಸ ಸಾಹಿತ್ಯದ ಉದ್ಯಾನದಲ್ಲಿ ಸುಂದರ ಪುಷ್ಪಗಳಾಗಿ ಪಲ್ಲವಿಸಿವ. ರಸಾನುಭವದ ರಮಣೀಯ ಕಾವ್ಯಗಳಾದ ಹರಿದಾಸರ ಕೃತಿಗಳು ಲೌಕಿಕದ ಎಲ್ಲೆ ಮೀರಿ ಅಲೌಕಿಕ ಸಂತೋಷವನ್ನು, ಧನ್ಯತೆಯನ್ನು, ಸಾರ್ಥಕತೆಯನ್ನು ನೀಡಬಲ್ಲ ಅಮೃತವಾಹಿನಿಯಾಗಿವ. "ಆತ್ಮನಿವೇದನೆಯಿಂದ ಮೂಡಲಾಗುವ ಈ ಕೀರ್ತನವಾಹಿನಿ, ಹರಿದಾಸರ ಅಪರೋಕ್ಷಾನುಭವದಿಂದ ಆಧ್ಯಾತ್ಮಿಕ ಹರವಾಗಿ ಪ್ರವರ್ಧಿಸಿ ಕಡಗ ಸಾಗ್ರ

ಮಾನವ ಸಮುದಾಯದ ಸಾತ್ವಿಕ ಜೀವನದ ಹೆಗ್ಗಡಲನ್ನು ಹೋಗಿ ಸೇರುತ್ತದೆ 1

## ಅಂಕಿತ ವೈಶಿಷ್ಟ್ಯ

ತಮ್ಮ ದ್ವಾದಶಸ್ತೋತ್ರದ ಪ್ರತಿ ಅಧ್ಯಾಯದ ಕಡೆಯಲ್ಲೂ ಮಧ್ವಾಚಾರ್ಯರು 'ಆನಂದತೀರ್ಥ' ಎಂಬ ಅಂಕಿತ ಹಾಕಿ ಭಗವಂತನನ್ನು ಗಾನ ಮಾಡಿ ಒಲಿಸುವ ಭಕ್ತರು ಅಂಕಿತ ಹಾಕಬೇಕೆಂದು ತೋರಿಸಿದರು. ಹರಿದಾಸ ಸಾಹಿತ್ಯದಲ್ಲಿ ಸಾಧಾರಣವಾಗಿ ಪುರಂದರದಾಸರ ಪ್ರಣಾಳಿಕೆಯಂತ 'ಅಂಕಿತವಿಲ್ಲದ ದೇಹ ನಿಷಿದ್ಧ ಅಂಕಿತವಿಲ್ಲದ ಕಾವ್ಯ ಶೋಭಿಸದು ' ಮುದ್ರಿಕೆ ಅಥವಾ ಅಂಕಿತ ವನ್ನು, ಸ್ವರೂಪವನ್ನು ತಿಳಿದ ಗುರುಗಳಿಂದಾಗಲೀ ಅಥವಾ ಸ್ವಪ್ನಸೂಚನೆಯಿಂದ ಯಾಗಲೀ ದಾಸರು ಪಡೆಯುವುದು ರೂಢಿ ಅನೇಕ ಹರಿದಾಸರ ಅಂಕಿತ ವಿಠಲ ಪದ್ದದಿಂದ ಕಡೆಯಾದರೂ 'ಸಿರಿಕೃಷ್ಣ ಹಯವದನ' 'ಕಾಗಿನೆಲೆಯಾದಿಕೇಶವ ಹೀಗೆ ತಮ್ಮ ಆರಾಧ್ಯದೈವವನ್ನೇ ಅಂಕಿತ ಮಾಡಿ ಕೊಂಡಿರುವ ಸಂದರ್ಭಗಳೂ ಇಲ್ಲದಿಲ್ಲ ಆದರೆ ದಾಸ ಸಾಹಿತ್ಯ ಪ್ರವರ್ತಕರಾದ ಶ್ರೀ ಪಾದರಾಯರು 'ರಂಗವಿಠಲ' ಅಂಕಿತದ ಮೂಲಕ ವಿಠಲ ಸಂಪ್ರದಾಯದ ಅಂಕಿತಕ್ಕೆ ನಾಂದಿ ಹಾಡಿದರು 'ಪುರಂದರವಿಠಲ' ಅಂಕಿತ ಜಗದ್ವಿಖ್ಯಾತ ವಾಯಿತು ಅಲ್ಲಿಂದ ವಿಜಯವಿಠಲ, ಗೋಪಾಲವಿಠಲ, ಜಗನ್ನಾಥವಿಠಲ ಹೀಗೆ ವಿಠಲ ಪರಂಪರೆಯ ಅಂಕಿತದ ಹರಿದಾಸ ಪಡೆಯೇ ಸಿದ್ಧವಾಯಿತು.

ಗುರುಗಳು ಅಂಕಿತ ನೀಡುವಾಗ ಅಂಕಿತ ಪದವನ್ನು ರಚಿಸುವುದು ಸಂಪ್ರದಾಯ ಶಿಷ್ಯನಿಗೆ ನೀಡಲಾಗುವ ಅಂಕಿತದಿಂದ ಹಾಡು ಪ್ರಾರಂಭ ವಾಗಿ ಗುರುಗಳ ಅಂಕಿತದಿಂದ ಕಡಯಾಗುವಂತೆ ಈ ಪದ್ಯವನ್ನು ರಚಿಸಲಾಗು ವುದು ವಿಜಯದಾಸರು ಗೋಪಾಲದಾಸರಿಗೆ ಅಂಕಿತ ಪ್ರದಾನ ಮಾಡಿದಾಗ

---

1 ಡಾ॥ ವಿ ಎಸ್ ನಾಗರತ್ನ ಅವರು ಸಂಪಾದಿಸಿರುವ ಹರಿದಾಸವಾಙ್ಮಯ ಕೃತಿಯಲ್ಲಿನ ಡಾ॥ ಜಿ ವರದರಾಜಾರಾವ್ ಅವರ ಲೇಖನ ಪುಟ ೭

"ಗೋಪಾಲ ವಿಠಲ ನಿನ್ನ ಪೂಜೆ ಮಾಡುವೆನು
ಕಾಪಾಡು ಈ ಮಾತನು" ಎಂದು ಪ್ರಾರಂಭಿಸಿ ಕಡೆಯನುಡಿಯಲ್ಲಿ
"ಅಂಕಿತವ ನಾನಿತ್ತೆ ನಿನ್ನ ಪ್ರೇರಣೆಯಿಂದ ಕಿಂಕರಗೆ ಲೌಕಿಕವ
ಡೊಂಕು ನಡತೆಯ ಬಿಡಿಸಿ ಜನುಮ ಜನುಮದಲ್ಲಿದ್ದ
ಪಂಕನಿಕರವ ತೊಲಗಿಸಿ
ಶಂಕೆಪಟ್ಟುದಂತ ಕಾವ್ಯ ಪಾಲಿಪುದು
ಸಂಕಟಗಳಟ್ಟಿಭಾಗ ವೆಂಕಟಕೃಷ್ಣನು ನೀನು ವಿಜಯವಿಠ್ಠಲ
ಇಂದು ಅಂಕುರವ ಫಲಿಸಿ ಫಲಪ್ರಾಪ್ತಿಯಾಗಲಿ" ಎಂದಿದ್ದಾರೆ

ಅಂಕಿತ ಹಾಗೂ ಹರಿದಾಸದೀಕ್ಷೆ ಎಲ್ಲ ಹರಿದಾಸರಿಗೂ ಅತ್ಯಗತ್ಯ ಪುರಂದರದಾಸರಿಗೆ ವ್ಯಾಸರಾಯರಿಂದ ತಪ್ತಮುದ್ರಾಂಕನ ಮೂಲಮಂತ್ರೋಪದೇಶ, ಹರಿದಾಸದೀಕ್ಷೆ ಹಾಗೂ ಪದ ಪದ್ಯರಚನೆಗೆ ಕಾವ್ಯಾಂಕಿತ ಲಭವಾದಾಗಲೇ ಅವರ ಹರಿದಾಸನ ಜಗತ್ತಿಗೆ ಮಾರ್ಗದರ್ಶನವಾಯಿತು 'ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ನಂಬಿಕೆ ಹರಿದಿನ—ವ್ರತಾಚರಣೆಗಳ ಪಾಲನೆ ಹರಿಭಜನ ಹಾಗೂ ಸದಾಚಾರ ದಾಸರಿಗೆ ಕಡ್ಡಾಯವಾದವು "ನಾಲ ಮಾಡಲಿ ಬೇಡ, ನಾಲವೆಂದೆನಬೇಡ, ನಾಳಗೆನಂಬಿ ಚಿಂತಬೇಡ" ಎಂಬ ನೀತಿ ಹರಿದಾಸರದಾಯಿತು 'ಕಾಲಲಿ ಗೆಜ್ಜೆಕಟ್ಟಿ ನೀಲವರ್ಣನ ಗುಣ ಆಲಾಪಿಸುತ ಒಲಿ ಓಲಗ ಮಾಡುವಂಥ ಮಧುಕರ ವೃತ್ತಿ' ಹರಿದಾಸವೃತ್ತಿಯೆನಿಸಿತು ಕೊರಳಲ್ಲಿ ತುಳಸೀಮಾಲ, ಊರ್ಧ್ವಪುಂಡ್ರ, ದಂಡಿಗೆ. ಬೆತ್ತ, ಗೋಪಾಲಬುಟ್ಟಿ, ಚಿಟಿಕೆ, ಗಾಯನ, ನರ್ತನ, ಪರಿವಾಣಸೇವೆ ಹಾಗೂ ನಿತ್ಯಯಾಯವಾರವೃತ್ತಿ ಇದೇ ಹರಿದಾಸಸಂಸ್ಕೃತಿಯಾಯಿತು ಹರಿದಾಸರ ದೃಷ್ಟಿಯಲ್ಲಿ ಸಮಸ್ತವೂ 'ಕೃಷ್ಣಾರ್ಪಣ' ಜ್ಞಾನಕಿಲ್ಲದ ಯೋಗಿ ಪರರ ಮನೆಗಳ ಪೊಕ್ಕು ಕಾಸುಗಳಿಸುವರು" ಹರಿದಾಸರಲ್ಲ "ಡಂಬಕದಿ ತುಳಸೀಮಾಲ ಧರಿಸಿ ಹರಿಸ್ಮರಣೆ ಮಾಡಿ ಜನರ ಮುಂದೆ ಸಂಭ್ರಮ ಊಟ ಬಯಸುವವರು" ಹರಿದಾಸರಲ್ಲ ಆಧ್ಯಾತ್ಮಿಕ ಸಾಧನೆಯ ದಾರಿಯಲ್ಲಿ ಏಕಾಗ್ರಚಿತ್ತರಾಗಿ ಭಗವದರ್ಪಣಭಾವದಿಂದ ಮುನ್ನಡೆವ ಭಾವವೇ ಹರಿದಾಸ್ಯಭಾವ ಸ್ವರೂಪೋದ್ಧಾರ ಹಾಗೂ ಲೋಕೋಪಕಾರ ಹರಿದಾಸವ್ಯಕ್ತಿತ್ವದ ಎರಡು ಮುಖಗಳು "ಕಾಯುವಾರನು ಕೃಷ್ಣ ಕಂಡವರ ಬಾಗಿಲನು ನಾಯಿಕುನ್ನಿಗಳಂತೆ ಪರರ ಪೀಡಿಸುತ" ಎನ್ನುವ

ಧೃಢವಿರಬೇಕು. ಮನೆಮಡದಿ ಮಕ್ಕಳೊಡನಿದ್ದೂ ಜ್ಞಾನ ಭಕ್ತಿ ವೈರಾಗ್ಯ ತಳೆದಿರಬೇಕು

"ಪಂಕಜನಾಭ ಪ್ರಿಯ ಪುರಂದರ ವಿಠಲನ ಅಂಕಿತವನಿತ್ತ ಗುರುವ್ಯಾಸ ಮುನಿರಾಯ" ಅಂಕಿತ ದೊರೆತೊಡನೆಯೇ ಪುರಂದರದಾಸರಿಗಾದ ಆನಂದ ಅಷ್ಟಿಷ್ಟಲ್ಲ 'ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು ಹರಿದಾಸರ ಸಂಗ ದೊರೆಯಿತು ಎನಗಿಂಗೆ ಇನ್ನೇನಿನ್ನೇನು, ವರಗುರು ಉಪದೇಶ ಎನಗಾಯ್ತು ಇನ್ನಿಂಗೆ ಇನ್ನೇನಿನ್ನೇನು' ಅಂಕಿತದೊರೆತೊಡನೆಯೇ ಮಾಯದ ಸಂಸಾರ ಮಮಕಾರ ತಗ್ಗಿತು ತೋಯಜಾಕ್ಷನ ನಾಮ ಜಿಹ್ವೆಯಲಿ ನೆಲಸಿತು ಹಲವು ದೈವಗಳೆಂಬ ಹಂಬಲ ಬಿಡಿಸಿತು ಜಲಜನಾಭನ ಹೃದಯದಿ ಧ್ಯಾನ ನಿಲಿಸಿತು

ತಮಗಾದ ಅಂಕಿತಪ್ರದಾನಕ್ರಮವನ್ನು ಒಂದು ಸುಳಾದಿಯಲ್ಲಿ ಪ್ರಸ್ತಾಪಿಸಿರುವ ವಿಜಯರಾಯರು "ಗುರುದಾಸರಾಯರೆನಗೆ ದಾಸತ್ವನೀಡೋಕ್ರಮ ಕರುಣದಿಂದಲಿ ವ್ಯಾಸಕಾಶಿಯಲಿ ವರುಷದಿ ಮಾಸಮುಟ್ಟಿ ಪೇಳುವೆನು", 'ತ್ರಿಸ್ಥರಿಯದಲ್ಲಿ ಹುಳಿದ ಶಾಂತಿ ಮಂತ್ರವ ಮನದಿ ಪೇಳಿಸುತ, ತತ್ವಗಳ ಆನುವಾಗಿ ತಿಳಿಸುತ್ತಾ ವನಜನಾಭನವಾದ ತುತಿವಂಥ ವಕ್ತ್ರಗೆ ಘನವದ ರೂಪ ದಂಕಿತವ ಕೊಟ್ಟು ಅನುಸರಿಸಿದಿಶಾಂತಿ ಹರಿಸಿ' ಎಂದಿದ್ದಾರೆ ವಿಜಯ ದಾಸರು ಅಂಕಿತ ಪಡೆದ ಹರಿದಾಸರಿಗೆ ಕೆಲವು ನಿಯಮಗಳನ್ನು ಸಂಹಿತೆಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ 'ತಪ್ತಮುದ್ರಾಂಕಿತ ಧರಿಸಬೇಕು ಅನ್ಯವಾದಾದಿಗಳ ಆಪಾರಕ್ಕೆ ಬೀಳದಿರಬೇಕು ಅಂದವರು ತನಗೆ ಬಹುಬಂಧುಗಳು ಎನಬೇಕು ಇಂದ್ರಿಯಗಳನು ನಿಗ್ರಹಿಸಬೇಕು ಪಾಪಬುದ್ಧಿ ನಿತ್ಯ ತೊರೆಯಬೇಕು, 'ಕೆಟ್ಟದ್ದು ಕುರುಡನಂದೆನಿಸಬೇಕು' ಸದಾ "ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರಿ" ಎಂದು ಪ್ರಾರ್ಥಿಸುತ್ತಿರಬೇಕು .

## ದಾಸಕೂಟ–ವ್ಯಾಸಕೂಟ

ಪಕ್ಷಧರಮಿಶ್ರ ನದಿ ಸನ್ಯಾಸಿ ಎಂಬಂತ ನವೀನನ್ಯಾಯಸರೆಂದು ಖ್ಯಾತರಾಗಿದ್ದ ವ್ಯಾಸರಾಜರ ಕಾಲದಲ್ಲಿ ದಾಸಕೂಟ ಸಂಘಟಿತವಾಗಿ ಬಲಿಷ್ಠ ಶಕ್ತಿ ಪಡೆಯಿತು. ದಾಸಕೂಟಕ್ಕೆ ಹರಿದಾಸದೀಕ್ಷೆಯು ಅಗತ್ಯವಿತ್ತು. ದಾಸ

ಕೂಟದಲ್ಲಿ ಎಲ್ಲರಿಗೂ ಗೌರವವಿತ್ತು. ಭಕ್ತಿಯ ಪರಿಕಲ್ಪನೆಯನ್ನು ಕುರುಡು ನಂಬಿಕೆಯ, ಮಾತ್ಸರ್ಯದ ಬಿಗಿ ಮುಷ್ಟಿಯಿಂದ ಬಿಡಿಸಲು ಅದು ಸಹಕಾರಿಯಾಯಿತು. ದಾಸಕೂಟ ಜನರದಿನದಿನದ ಅನುಭವಗಳಿಗೆ ನಾಲಗೆಯಾಯಿತು. ದಿನನಿತ್ಯದ ಬದುಕಿನಲ್ಲಿ ಸಜ್ಜನಿಕೆಯನ್ನೂ, ನಮ್ರತೆಯನ್ನೂ, ಸಮಾಧಾನವನ್ನೂ ಉದ್ದೀಪಿಸುವ ಸಮಾಜ ನಿರ್ಮಾಣಕಾರ್ಯದಲ್ಲಿ ದಾಸಕೂಟ ತನ್ನನ್ನು ತೊಡಗಿಸಿಕೊಂಡಿತು. ದೇವರ ಕೇಂದ್ರಿತವಾದ ದಾಸಕೂಟ 'ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ಲಕ್ಷ್ಮೀರಮಣ' ಎಂದು ಹೆಮ್ಮೆಯಿಂದ ಘೋಷಿಸಿತು. ದಾಸಕೂಟ ಕನ್ನಡಸಾಹಿತ್ಯ ಸಂಗೀತಗಳಿಗೆ ಚಿರಂಜೀವಿಶಕ್ತಿಯಾಯಿತು.

ದಾಸಕೂಟದ ಧ್ವನಿ ಸಿದ್ಧಾಂತದ ಪ್ರಕ್ರಿಯೆಗಿಂತಲೂ ಮೇಲೇರಿ 'ಮಾನವ ಜನ್ಮ ದೊಡ್ಡದು-ಇದ ಹಾನಿ ಮಾಡಲುಬೇಡಿ' ಎಂದು ಹೇಳಿ ಮಾನವೀಯ ಮೌಲ್ಯಗಳ ಎತ್ತರವನ್ನು ತನ್ನ ಸಾಹಿತ್ಯದ ಮೂಲಕ ಬಿತ್ತರಿಸಿತು. ದಾಸಕೂಟದಲ್ಲಿ ಹರಿದಾಸರೆಲ್ಲಾ ಒಂದೇ ಕುಟುಂಬ ಎಂಬ ಆತ್ಮೀಯ ವ್ಯವಸ್ಥೆಯಿತ್ತು. ಆದರೆ ದಾಸಕೂಟ ಅಧ್ಯಕ್ಷ, ಕಾರ್ಯದರ್ಶಿ, ನಿಯಮಾವಳಿ ಮುಂತಾದ ನೇರ ಮೂರ್ತಸ್ವರೂಪವನ್ನು ಎಂದೂ ಪಡೆಯಲಿಲ್ಲ. ಅದರ ಅಗತ್ಯವೂ ಅದಕ್ಕಿರಲಿಲ್ಲ. ದಾಸಕೂಟ ಪದಪದ್ಯಗಳನ್ನು, ಕೃತಿ ಕೀರ್ತನೆಗಳನ್ನು, ದೇವರನಾಮ ಸುಳಾದಿ ಉಗಾಭೋಗಗಳನ್ನು ದಂಡಕ ವೃತ್ತನಾಮಗಳನ್ನೂ, ಕಾವ್ಯ ಮಹಾಕಾವ್ಯಗಳನ್ನೂ ರಚಿಸಿ ಕನ್ನಡ ವಾಙ್ಮಯದ ವಿಶಿಷ್ಟ ಸಾರಸ್ವತ ಭಂಡಾರವಾಗಿ ಪರಿಣಮಿಸಿತು. ದಾಸಕೂಟ ಅತ್ಯಂತ ವಿಚಾರವಂತ ಪರಿಸರದಲ್ಲೇ ಇದ್ದು ಕನ್ನಡ ಭಾಷೆ ಹಾಗೂ ಸಂಸ್ಕೃತಿಯನ್ನು ಎತ್ತಿ ಹಿಡಿಯಿತು.

ವ್ಯಾಸಕೂಟ ಎಂಬ ಹೆಸರು ಸ್ಪಷ್ಟವಾಗಿ ಬಳಕೆಯಲ್ಲಿ ಒರದಿದ್ದರೂ ವೇದವ್ಯಾಸರ ಶಾಸ್ತ್ರಗಳ ಅಧ್ಯಯನ, ಅಧ್ಯಾಪನ, ಸರ್ವಮೂಲಗ್ರಂಥಗಳ ಸಮಗ್ರವ್ಯಾಸಂಗದ ಮೂಲಕ ವಿದ್ವಾಂಸರಾಗಿ ವೈದಿಕರೆನಿಸಿ, ವ್ಯಾಸರಾಜರ, ತರ್ಕತಾಂಡವ ನ್ಯಾಯಾಮೃತ ಚಂದ್ರಿಕಾಗ್ರಂಥಗಳನ್ನು ಸಮಗ್ರವಾಗಿ ಅಭ್ಯಸಿಸಿ ಪ್ರಕಾಂಡ ಪಂಡಿತರೆನಿಸಿಕೊಂಡವರು ವ್ಯಾಸಕೂಟ'ದವರೆನಿಸಿದರು. "ಮೂಲಸಂಸ್ಕೃತಗ್ರಂಥಗಳನ್ನು ಟೀಕಾಟಿಪ್ಪಣಿಗಳನ್ನು ವ್ಯಾಸಂಗಮಾಡಿ ಖಂಡನ ಮಂಡನಗಳಿಂದ ದಿಗ್ವಿಜಯಕ್ಕೆ ಹೊರಡುವ ಪ್ರಕಾಂಡ ಪಂಡಿತರು ಮತ್ತು

ಅವರ ಅನುಯಾಯಿಗಳು ವ್ಯಾಸಕೂಟದವರೆನಿಸಿದರು. ಅದರ ಸಾರಭೂತವಾದ ತತ್ತ್ವಾಮೃತವನ್ನು ಸಂಗೀತ ಸಾಹಿತ್ಯದ ಮೂಲಕವಾಗಿ ಪರಿಣಾಮಕಾರಿಯಾಗಿ ಬೋಧಿಸಿದವರು ದಾಸಕೂಟದವರೆನಿಸಿದರು.[1]

ಶ್ರೀ ವ್ಯಾಸರಾಜರು ತಮ್ಮ ಅಗಾಧ ವಿದ್ವತ್ಪೂರ್ಣ ವ್ಯಕ್ತಿತ್ವವನ್ನು ವ್ಯಾಸಕೂಟದ ಮೂಲಕ ದ್ವೈತ ಸಿದ್ಧಾಂತ ಪ್ರಚಾರಕ್ಕೆ ತೊಡಗಿಸಿದಂತೆಯೇ ಪಾಂಡಿತ್ಯ ಪ್ರೌಢಿಮೆ, ವಾಕ್ಯಾರ್ಥ ಪ್ರಸಕ್ತಿಗಳಿಗಿಂತ ಎತ್ತರದ ಭಗವದ್ಭಕ್ತಿ, ಸಾಧುಸಂಗೀತ, ಹರಿದಾಸ್ಯವೃತ್ತಿ, ಲೋಕನೀತಿ, ಶ್ರೀಸಾಮಾನ್ಯನ ಆತ್ಮೋದ್ಧಾರಗಳ ಬಗೆಗಿನ ಕಳಕಳಿಯಿಂದಲೂ ದಾಸಕೂಟದ ಚಾಲನಶಕ್ತಿಯಾದರು. ವ್ಯಾಸಕೂಟದವರು ವೇದಾಂತ, ಚಿಂತನ, ಮಂಥನಗಳ ದಾರಿಯಲ್ಲಿ ಹೊರಟರೆ ದಾಸಕೂಟದವರು ನಾಮಸ್ಮರಣೆ ಕೀರ್ತನ, ಭಜನೆ, ಮಾನಸಪೂಜೆಯ ದಾರಿಯಲ್ಲಿ ಹೊರಟರು. ವ್ಯಾಸಕೂಟದವರು ಶಾಸ್ತ್ರಗ್ರಂಥಗಳ ರಚನೆ, ಮನನ, ಗ್ರಂಥಸಂರಕ್ಷಣೆಗಳಲ್ಲಿ ತೊಡಗಿ, ಗ್ರಂಥಸ್ಥ ಪಂಡಿತರಾಗಿದ್ದರೆ ದಾಸಕೂಟದವರು ತಮ್ಮ ವ್ಯಾಪಕವಾದ ದೀರ್ಘವಾದ ವಾಕ್‌ಪರಂಪರೆಯಿಂದಲೇ ಸಾಹಿತ್ಯವನ್ನು ಮುಂದಿನ ಜನಾಂಗಕ್ಕೆ ತಲುಪಿಸುತ್ತಿದ್ದರು. ಆತ್ಮೋದ್ಧಾರ ವ್ಯಾಸಕೂಟದ ಅಂತಿಮ ಗುರಿಯಾದರೆ ಲೋಕೋಪಕಾರ ಹರಿದಾಸರ ಅಂತಿಮ ಧ್ಯೇಯವಾಯಿತು. ವ್ಯಾಸಕೂಟ ವೇದಮಂತ್ರಗಳ ಗಂಭೀರ ಧ್ವನಿಯ ರಾಜಮಾರ್ಗದಲ್ಲೇ ಉಳಿದು ಬಂತು. ದಾಸಕೂಟ ಜಾನಪದಗತ್ತನ್ನೂ, ಗ್ರಾಮ್ಯದ ಗಮ್ಮತ್ತನ್ನೂ ತನ್ನ ಸಾಹಿತ್ಯಕ್ಕೆ ಧ್ವನಿಯನ್ನಾಗಿ ಮಾಡಿಕೊಂಡಿತು. "ಗೆಜ್ಜೆಯ ಕಾಲಿಗೆ ಕಟ್ಟಿ ಲಜ್ಜೆ ಬಿಟ್ಟು ಹರಿಯ ನಾಮ ಗರ್ಜನೆ ಮಾಡುತ್ತ ಅಘವರ್ಜಿತವಾಗಿದ್ದವರ ಸಂಘ ದಾಸಕೂಟಕ್ಕಿತ್ತು. ಆದರೆ ವ್ಯಾಸಕೂಟದವರಿಗೆ ಈ 'ಸಂಘ'ದ ಸಂಘಟನೆ ಇರಲಿಲ್ಲ. ದಾಸಕೂಟದ ಸಿದ್ಧಾಂತವು 'ಸಂಘವಾಗಲೀ ಸಾಧುಸಂಘವಾಗಲೀ' ಪುರಂದರದಾಸರ ಈ ಸಿದ್ಧವಾಕ್ಯ ದಾಸಕೂಟದ ಸಿದ್ಧಿಸಾಧನೆಗಳನ್ನು ದಾಸಸಾಹಿತ್ಯದಿಂದಲೂ ಮೋಕ್ಷಸಾಧ್ಯವೆಂಬುದನ್ನು ತಿಳಿಸುವಂತಹುದು.

---

1 ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಬೆಂಗಳೂರು ವಿ.ವಿ.)' ಹರಿದಾಸ ಸಾಹಿತ್ಯದ ಹಿನ್ನೆಲೆ ಭಾಗ [illegible] – ಡಾ॥ ಕೆ.ಎಂ. ಕೃಷ್ಣರಾವ್ ಪುಟ 370

"ಕಾಮಧೇನು ಚಿಂತಾಮಣಿ ಕಲ್ಪವೃಕ್ಷನಾದ ಸ್ವಾಮಿ
ಪ್ರೇಮದಿಂದಲಿ ನೆನೆಯುವವರ ಭಾಗ್ಯಕ್ಕೆಣೆಯುಂಟೇ
ಸಾಮಾನ್ಯನಲ್ಲವೋ ಈತ ಮೋಕ್ಷಾದಿ ಸಂಪದವಿಗಳಿಗೆ
ಆ ಮಹಾ ಅಪರೋಕ್ಷಜ್ಞಾನ ದಾರ್ಢ್ಯ ಭಕುತಿಯ ಕೊಡುವ"

## ಹರಿದಾಸರ ಹೃದಯದೈವ ವಿಠಲ

ಅನೇಕ ಹರಿದಾಸರ ಅಂಕಿತ 'ವಿಠಲ' ಮೂಲವಾಗಿದ್ದು ಹರಿದಾಸ ಪಂಥದಲ್ಲಿ ವಿಠಲ ಬಹು ಮುಖ್ಯ ಪಾತ್ರವಹಿಸಿದ್ದಾನೆ ಪಾಂಡುರಂಗ ವಿಠಲ ವಿಷ್ಣುವಿನ ಪ್ರತೀಕವೆಂದು ಎಲ್ಲ ಹರಿದಾಸರೂ ಕೀರ್ತಿಸಿದ್ದಾರೆ ಪಂಢರಾಪುರ ಕನ್ನಡದ ಪಂಡರಿಗೆಯಾಗಿದ್ದು ಆರನೆಯ ಶತಮಾನದಲ್ಲಿ ಪಾಂಡುರಂಗಪಳ್ಳಿ ಎಂದಿತ್ತು

೧೨೩೭ ರ ಹೊಯ್ಸಳ ಸೋಮೇಶ್ವರನ ಈ ಶಾಸನದ ಒಕ್ಕಣೆ ಹೀಗಿದೆ "ಶಕವರ್ಷ ೧೧೫೯ ನೆಯ ದುರ್ಮುಖಿ ಸಂವತ್ಸರ ಪುಷ್ಯ ಬಹುಳ ಏಕಾದಶಿ ಯಂದು ವಿಠ್ಠಲ ದೇವರಿಗೆ ಬೀಮರಥೀ ನದೀತೀರ ಸಂನಿವಿಷ್ಟ ಪಂಡರಗೆ ನಾಮಾನಂ ಮಹಾಗ್ರಾಮ ಮಧ್ಯವಾಸತೇ ಪುಂಡರೀಕ ಮುನಿಃ ಕುಮುದ ವಿಕಸ ಸುಧಾಕರಾಯ ಭಗವತೇ ವಿಠ್ಠಲದೇವಾಯ " ಮರಾಠೀ ಸಂತರಂತೂ ವಿಠ್ಠಲ ಕನ್ನಡಿಗರ ದೇವರೆಂದೇ ಡಂಗೂರ ಹೊಡೆದಿದ್ದಾರೆ ಸಂತ ನಾಮದೇವನ 'ಕಾನಡಾ ವಿಠ್ಠಲವೋ ನಾಮ ಬರವೇ ರೂಪ ಬರವೇ ದರ್ಶನ ಬರವೇ ಕಾನಡಿಯಾ' ಎಂಬ ಮಾತುಗಳೂ, ಜ್ಞಾನದೇವನ ಸುಪ್ರಸಿದ್ಧ ಅಭಂಗಗಳಲ್ಲಿ ಬರುವ ಕಾನಡಾ ಹೋ ವಿಠ್ಠಲೂ ಕರ್ನಾಟಕೂ' ಎಂಬ ಮಾತುಗಳೂ ವಿಠ್ಠಲ ಅಚ್ಚ ಕನ್ನಡಿಗ ದೈವವೆಂಬುದನ್ನು ಸಮರ್ಥಿಸುತ್ತಿವೆ ಶಕ ೧೨೨೫ ರ ಸುಮಾರಿನಲ್ಲಿದ್ದ ಚೌಂಡರಸನ 'ಅಭಿನವ ದಶಕುಮಾರ ಚರಿತೆ' ಯಲ್ಲಿ ಬರುವ ವಿಠಲಾಷ್ಟಕವೂ ವಿಠ್ಠಲ ಮೂರ್ತಿಯು ವಿಷ್ಣುಮೂರ್ತಿಯೆಂದೇ ನಿರ್ಧಾರ ಮಾಡುವಂತೆ ವರ್ಣಿಸುತ್ತದೆ ಮಧ್ವಾಚಾರ್ಯರೂ ತಾವು ಸ್ಥಾಪಿಸಿದ ಅಷ್ಟ ಮಠಗಳ ಕೆಲವು ಪ್ರಥಮ ಶಿಷ್ಯರಿಗೆ ವಿಠ್ಠಲ ಮೂರ್ತಿಗಳನ್ನಿತ್ತಿದ್ದಾರೆ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದ ಅಕ್ಷೋಭ್ಯತೀರ್ಥರು ಜಯತೀರ್ಥರಿಗೆ ಪಂಢರಾ

ಪುರದ ಬಳಿಯ ಭೀಮಾ ತೀರದಲ್ಲಿಯೇ ಸನ್ಯಾಸಾಶ್ರಮ ನೀಡಿದರು ಮಧ್ವಾಚಾರ್ಯರ ಇನ್ನೊಬ್ಬ ಶಿಷ್ಯರಾದ ಮಾಧವತೀರ್ಥರೂ ಭೀಮಾತೀರದ ಮಣೂರು ಗ್ರಾಮದಲ್ಲಿಯೇ ಬೃಂದಾವನಸ್ಥರಾದರು ಶ್ರೀ ಪಾದರಾಜರಂತೂ 'ರಂಗ ವಿಠಲ' ಎಂದೇ ಅಂಕಿತ ಹಾಕಿ ಹರಿದಾಸಸಾಹಿತ್ಯ ಪ್ರವರ್ತನೆ ಮಾಡಿದರು. ವಿಜಯನಗರದ ವ್ಯಾಸರಾಜರ ಕಾಲದಲ್ಲಿ ಕೃಷ್ಣದೇವರಾಯ ಕಟ್ಟಿಸಿದ ವಿಜಯವಿಠ್ಠಲನ ಗುಡಿ ಐತಿಹಾಸಿಕ ಸಾಧನೆ.

ವಿಠಲ ಪುರಂದರದಾಸರ ಆರಾಧ್ಯದೈವ ಈಗಲೂ ಪಂಢರಾಪುರದಲ್ಲಿ ವಿಠಲನ ದೇವಾಲಯದಲ್ಲಿ ಪುರಂದರದಾಸರ ಕಂಬ ಎಂದು ಒಂದು ಪ್ರಮುಖ ಕಂಬವನ್ನು ಅಲ್ಲಿಯ ಜನ ತೋರಿಸುತ್ತಾರೆ ಪುರಂದರದಾಸರ ಸಾಹಿತ್ಯವಂತೂ ಮರಾಠಿಯಲ್ಲಿ ವ್ಯಾಪಕ ಪ್ರಚಾರದಲ್ಲಿದೆ ಮಹಾರಾಷ್ಟ್ರದ ಸಂತಮಾಲಿಕೆಯಲ್ಲಿ ಅವರಿಗೆ ಗೌರವ ಸ್ಥಾನವಿದೆ ಕ್ರಿ ಶ ೧೮ ನೇಯ ಶತಮಾನದಲ್ಲಿ ಮಹಾರಾಷ್ಟ್ರದ 'ಕರ್ಹಾಡಾ'ದಲ್ಲಿ ಆಗಿಹೋದ ಸಂತ ವಿಠೋಬಾ ಅಣ್ಣಾ ದಫ್ತರದಾರರು ತಾವು ಪುರಂದರದಾಸರ ಅವತಾರವೆಂದೂ, ಅಪೂರ್ಣವಾಗಿದ್ದ ಇಪ್ಪತ್ತೈದು ಸಹಸ್ರ ಕೃತಿಗಳನ್ನು ಪೂರ್ತೈಸುವ ಹೊಣೆಯನ್ನು ತಾವು ಹೊತ್ತಿದ್ದರೆಂದೂ ಹೇಳುತ್ತಿದ್ದ ಸಂಗತಿಯನ್ನು ಆಜಗಾಂವಕರ್ ಎನ್ನುವ ವಿದ್ವಾಂಸರು ತಾವು ಬರೆದಿರುವ ಮಹಾರಾಷ್ಟ್ರ ಕವಿಚರಿತ್ರಾ ಕೃತಿಯಲ್ಲಿ ಪ್ರಕಟಿಸಿದ್ದಾರೆ ಇವರಿಬ್ಬರ ಕೃತಿಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿರುವವರು, ವಿಠೋಬಾ ಅಣ್ಣಾ ದಫ್ತರದಾರ್ ಅವರ ಮೇಲೆ ಪುರಂದರದಾಸರ ಹಾಗೂ ಅವರ ಸಾಹಿತ್ಯದ ತೀವ್ರ ಪ್ರಭಾವದ ಛಾಯೆಯನ್ನು ಸ್ಪಷ್ಟವಾಗಿ ಗಮನಿಸಿದ್ದಾರೆ

## ಹರಿದಾಸ ಸಾಹಿತ್ಯ ಹಾಗೂ ಕರ್ನಾಟಕ ಸಂಗೀತ

ದಾಸಕೂಟದ ಹರಿದಾಸರಿಂದ ಕರ್ನಾಟಕ ಸಂಗೀತ ವ್ಯಾಪಕವೂ ಜನಪ್ರಿಯವೂ ಆಯಿತು. ಪುರಂದರದಾಸರನ್ನು ಕರ್ನಾಟಕ ಸಂಗೀತ ಪ್ರತಿಷ್ಠಾಪನಾಚಾರ್ಯರೆಂದು ನಾಡು ಗೌರವಿಸುತ್ತಿದೆ ಹದಿನೈದನೆಯ ಶತಮಾನದ ವರೆಗೆ ಕೇವಲ ರಾಜಾಸ್ಥಾನಗಳ, ವಿದ್ವಾಂಸರ, ಶ್ರೀಮಂತರ ಸೊತ್ತಾಗಿದ್ದ ಸಂಗೀತ ಕಲೆ ಜನಸಾಮಾನ್ಯನ ಮನೆಬಾಗಿಲಿಗೆ ತಲುಪಿದ್ದೇ ಪುರಂದರದಾಸರಿಂದ,

ಜನಸಾಮಾನ್ಯರಿಗೂ ಅವರಲ್ಲಿ ಅಭಿರುಚಿ ಆಸಕ್ತಿ ಮೂಡಿಸುವ ಸಾಧನ ಪುರಂದರ ದಾಸರು ಭಕ್ತಿಪಥದಲ್ಲಿ ತತ್ವಚಿಂತನವನ್ನು ಸಾಧಿಸಿ ಸಮಸ್ತರಿಗೂ ನೀಡಿ ಅವರನ್ನು ಸನ್ಮಾರ್ಗಕ್ಕೆ ಹಚ್ಚಬೇಕೆಂಬ ದಾಸರ ಆಕಾಂಕ್ಷೆಗೆ ಒಂದು ಪ್ರಭಾವಿ ಮಾಧ್ಯಮದ ಅಗತ್ಯವಿತ್ತು. ರಾಗಲಯಬದ್ಧ ರಚನೆಗಳಲ್ಲಿ ಹಿತಮಿತವಾದ ಉತ್ತಮ ಬೋಧೆಯನ್ನು ನೀಡಿದರೆ ಅವು ಜನಮನದಲ್ಲಿ ನಿಲ್ಲಬಲ್ಲವು ಎಂಬುದನ್ನರಿತ ದಾಸರು ಮಾತನಾಡುವ ಬದಲು ಹಾಡತೊಡಗಿದರು. ನಿತ್ಯ ಜೀವನದ ನೋವು ನಲಿವುಗಳನ್ನು, ನಿಜದೃಷ್ಟಾಂತಗಳನ್ನು ಸಂಗೀತದ ಮೂಲಕ ಜನತೆಗೆ ನೀಡಿ ಅವರನ್ನು ಚಿಂತನಶೀಲರನ್ನಾಗುವಂತೆ ಮಾಡಿದರು.

ಪುರಂದರದಾಸರು ಸಂಗೀತದ ಅಭ್ಯಾಸಕ್ಕೆ ಒಂದು ಜನಪ್ರಿಯ ಬುನಾದಿ ಹಾಕಿದರು. ಇಡೀ ಸಂಗೀತಪದ್ಧತಿಯನ್ನು ಒಂದು ನಿರ್ದಿಷ್ಟ ಪದ್ಧತಿಗೆ ವ್ಯವಸ್ಥೆಗೊಳಿಸಿದರು. ಸಂಗೀತ ಕಲಿಯುವರಿಗೆ ಸರಳವಾದ ಮತ್ತು ಧ್ವನಿ ಅಭ್ಯಾಸಕ್ಕೆ ಒಗ್ಗುವ ಮಾಯಾಮಾಳವಗೌಳ ರಾಗವನ್ನಾರಿಸಿ ಅದರಲ್ಲಿ ಸರಳವರಸೆ, ಜಂಟಿ ವರಸೆ, ಅಲಂಕಾರ ಮುಂತಾದುವುಗಳನ್ನು ರಚಿಸಿದರು. ಅವನ್ನು ದಾಟಿದೊಡನೆ ನೇರ ಕಲಿಯಲು ಅನುಕೂಲ ಆಕರ್ಷಕವೆನಿಸುವಂತಹ ಪಿಳ್ಳಾರಿ ಗೀತೆಗಳನ್ನು ರಚಿಸಿದರು. ಇಂದಿಗೂ ಅವರ 'ಲಂಬೋದರ ಲಕುಮಿಕರ' ಹಾಗೂ 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ' ಕೃತಿಗಳೇ ಕರ್ನಾಟಕ ಸಂಗೀತದ ಪ್ರವೇಶದ್ವಾರ. ಪುರಂದರದಾಸರು ಅನೇಕ ಜಾನಪದ ಮಟ್ಟುಗಳಿಗೆ ಶಾಸ್ತ್ರೀಯರಾಗವನ್ನು ಅಳವಡಿಸಿದರು. ಸಂಗೀತದ ವ್ಯಾಪ್ತಿ, ಶಕ್ತಿ ಹಾಗೂ ಅರ್ಥಗಳು ಹೊಸ ಆಯಾಮ ಪಡೆದು ಅವರ ಕೀರ್ತನೆಗಳು ಅತ್ಯಂತ ಜನಪ್ರಿಯವಾದುವು. ಆ ಮೂಲಕ ದಾಸರು ಸಂಗೀತವನ್ನು ಪ್ರಭಾವಶಾಲಿ ಮಾಧ್ಯಮ ಮಾಡಿದರು. ಧಾತುವಿಗಿಂತ ಮಾತು ಮುಖ್ಯವಾಗುವ ಕೀರ್ತನೆಗಳನ್ನು ದಾಸರು ರಚಿಸಿದ್ದರೂ, ರಾಗ, ಭಾವ, ತಾಳಗತಿ ಹಾಗೂ ಅಪೂರ್ವ ರಾಗಗಳ ಸಂಚಾರ ವೈವಿಧ್ಯಗಳನ್ನು ಬಿಂಬಿಸುವ 'ಕೃತಿ'ಯೆಂಬ ಸಂಗೀತ ಪ್ರಕಾರವನ್ನು ಮೊಟ್ಟಮೊದಲಿಗೆ ಪುರಂದರದಾಸರೇ ನಿರ್ಮಿಸಿದರು. ಪ್ರಾಯಶಃ ಮುಂದಿನ ಎಲ್ಲ ವಾಗ್ಗೇಯಕಾರರುಗಳಿಗೂ ಪುರಂದರದಾಸರು ಸ್ಫೂರ್ತಿಮೂರ್ತಿಗಳಾದರು. ಪುರಂದರರ ದಾರಿಯಲ್ಲೇ ಮುಂದೆ ಬಂದ ಎಲ್ಲ ಹರಿದಾಸರು

ಸಾಹಿತ್ಯವನ್ನು ಸಂಗೀತಕ್ಕೆ ಸ್ಪಂದಿಸಿ ಕೃತಿರಚನೆ ಮಾಡಿದರು ಜಗನ್ನಾಥದಾಸರು, ಸಾರಪ್ಪರದ ಆನಂದದಾಸರು ಮುಂತಾದವರಂತೂ ಸ್ವತಃ ಸಂಗೀತ ವಿದ್ವಾಂಸರಾಗಿದ್ದವರು

## ದಾಸಸಾಹಿತ್ಯ ಹಾಗೂ ದ್ವೈತಸಿದ್ಧಾಂತ

ಹರಿದಾಸಸಾಹಿತ್ಯದ ಪ್ರವರ್ತಕರಾದ ಶ್ರೀಪಾದರಾಜರ 'ಮಧ್ವನಾಮ' ಕನ್ನಡದ ಕೃತಿ, ಮುಂದೆ ಬಂದ ಎಲ್ಲ ಹರಿದಾಸರಿಗೂ ತಾವು ಅನುಸರಿಸಬೇಕಾದ ತತ್ವದ ಮೂಲನೆಲೆಯನ್ನು ದಿಗ್ದರ್ಶಿಸಿತು ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಕೃತಿಗಳನ್ನು ವಿಶ್ವದರ್ಶನಕ್ಕೆ ನೀಡಿದ ವ್ಯಾಸರಾಜರು "ಪಾಪದ ಅಡವಿಗೆ ಬೆಂಕಿ ಕಾಮದ ಬೆಂಕಿಗೆ ಮೋಡ. ಮೋಹದ ಮೋಡಕ್ಕೆ ಬಿರುಗಾಳಿ, ಕೋಪದ ಬಿರುಗಾಳಿಗೆ ಸರ್ಪ ಸಂಸಾರಸರ್ಪಕ್ಕೆ ಗರುಡವೆಂದರೆ ಶ್ರೀ ಕೃಷ್ಣನ ಪಾದ ಸೇವೆಯೊಂದೇ ಎಂದು ಸಾರಿದರು ಅವರ 'ಸಂತತದಲಿ ನಿನ್ನ ನಾಮ ನಾಲಿಗೆಯಲ್ಲಿ ! ಅಂತ್ಯಕಾಲದಲ್ಲಿ ವಿಶೇಷವಾಗಲೋ ಸಿರಿಕೃಷ್ಣಾ' ಎನ್ನುವ ಪದ ಮಧ್ವಾಚಾರ್ಯರ ದ್ವಾದಶಸ್ತೋತ್ರದಲ್ಲಿಯ ಸಂತತಂ ಚಿಂತಯೇನಂತಂ ಅಂತಕಾಲೇ ವಿಶೇಷತಃ' ಎನ್ನುವ ಸ್ತೋತ್ರದ ಕನ್ನಡ ಭಾವವೇ ಆಯಿತು

ವಾದಿರಾಜರಂತೂ ದ್ವೈತಸಿದ್ಧಾಂತವನ್ನು ಕನ್ನಡ ಸಾಹಿತ್ಯಕ್ಕೆ ತರುವಲ್ಲಿ ವಿಶೇಷವಾಗಿ ಯಶಸ್ವಿಯಾಗಿ ಕನ್ನಡ ತಾತ್ವಿಕ ಕ್ಷೇತ್ರದ ದಿಗಂತವನ್ನೇ ವಿಸ್ತರಿಸಿದರು. ಅವರ ವೈಕುಂಠ ವರ್ಣನೆ, ಸ್ವಪ್ನಪದ, ಗುಂಡಕ್ರಿಯೆ. ಹರಿಸರ್ವೋತ್ತಮಸಾರ, ಲಕ್ಷ್ಮೀಶೋಭಾನೆಗಳು ದ್ವೈತಸಿದ್ಧಾಂತದ ಅನೇಕ ಮುಖಗಳನ್ನು ಪರಿಚಯಿಸಿವೆ ಹರಿದಾಸ ಸಾಹಿತ್ಯ ಆಧ್ಯಾತ್ಮಿಕ ದೃಷ್ಟಿಯಿಂದ ಸಮೃದ್ಧಿಯಾದದ್ದು ವಾದಿರಾಜರಿಂದ ಎಂದರೆ ಅತಿಶಯೋಕ್ತಿಯಾಗಲಾರದು ಪುರಂದರದಾಸರಂತೂ ವ್ಯಾಸರಾಜರ ಮಧ್ವ ಸಿದ್ಧಾಂತದ ಒಂಬತ್ತು ಪ್ರಮೇಯಗಳನ್ನು ತಿಳಿಸುವ ನವರತ್ನ ಮಾಲಿಕೆಯಾದ 'ಶ್ರೀ ಮನ್ಮಧ್ವಮತೇ ಹರಿಃ ಪರತರಃ' ಎಂಬ ಕೃತಿಯ ಎಲ್ಲ ಅರ್ಥಗಳನ್ನು 'ಸತ್ಯಂಜಗಕಿದು ಪಂಚಭೇದವು' ಎನ್ನುವಕೃತಿಯಲ್ಲಿ ಅಡಗಿಸಿದ್ದರು ಹಾಗೆಯೇ 'ಹರಿಯೇ ಸರ್ವೋತ್ತಮ, ಹರಿಯೇ ಪರ

ದೇವತೆ ಹರಿ ಸರ್ವ ವಿಶ್ವಮಯನು' ಎನ್ನುವ ಪುರಂದರದಾಸರು ಈ ಪರಿಯ ಸೊಬಗಾವ ದೇವರಲಿ ಕಾಣೆ ಗೋಪೀ ಜನಪ್ರಿಯ ಗೋಪಾಲಗಲ್ಲದೆ' ಎಂದು ಹರಿಸರ್ವೋತ್ತಮತ್ವವನ್ನು ಸಾರಿದರು ವಿಜಯದಾಸರಂತೂ ನಾಹಂ ಕರ್ತಾ ಹರಿಃ ಕರ್ತಾ ಎನ್ನುವುದನ್ನು ಹರಿಯೇ ಜಗಕೆ ಕರ್ತಾ ಆವನೇ ಜಗಕೆ ಭರ್ತಾ' ಎಂದಿರುವರು

ಈಶದಾಸಭಾವಪ್ರಧಾನವಾದ ದ್ವೈತ ಸಿದ್ಧಾಂತ ಸೋಹಂ ಭಾವವನ್ನು ಹಿಂದಿಕ್ಕಿ ದಾಸೋಹಂ' ಎಂದು ಘೋಷಿಸುತ್ತದೆ ಅದನ್ನೇ ಜಗನ್ನಾಥದಾಸರು ದಾಸೋಹಂ ತವದಾಸೋಹಂ' ಎಂದು ಹೆಮ್ಮೆಯಿಂದ ನುಡಿದರು. ಡಂಗುರವ ಸಾರಿರಯ್ಯಾ ಡಿಂಗರಿಗರೆಲ್ಲರೂ ಭೂ ಮಂಡಲಕ್ಕೆ ಪಾಂಡುರಂಗ ವಿಠಲನೇ ಪರದೈವವೆಂದು' ಎನ್ನುವ ಪುರಂದರದಾಸರು ಜಯವದೆ ಜಯವದೆ ಈಮನಸಿತನಕೆ' ಎನ್ನುವ ಹಾಡಿನಲ್ಲಿ ಸಮಗ್ರ ದ್ವಾಸುಪರ್ಣಾ ಶೃತಿಯ ಅರ್ಥವಿಟ್ಟು ಜೀವೇಶ್ವರ ಭೇದದ ಪರಮ ತತ್ವವನ್ನು ಸಾರಿದರು ಅವರ ಎರಡೂ ಒಂದಾಗದು ರಂಗ, ಎರಡೂ ಒಂದಾಗದು ಎಂದೆಂದಿಗೂ' ಎನ್ನುವ ಹಾಡೂ ಸಹ ದ್ವಾಸುಪರ್ಣಾ ಸಯುಜಾ ಸಖಾಯ' ಎಂಬ ಉಪನಿಷದ್ವಾಕ್ಯವನ್ನೇ ತಿಳಿಸುತ್ತದೆ ಅಮೃತಂ ಭಕ್ತಿಸ್ತು ತತ್ಸಾಧನಂ ಎನ್ನುವಲ್ಲಿಯ ಭಕ್ತಿಯ ಮಹತ್ವವನ್ನು ದಾಸರಾಯರು ಸಕಲ ಸಾಧನಕೆಲ್ಲ ಸಿದ್ಧಗೊಳಿಸುವುದು ಭಕುತಿ ಸಾಧನವಲ್ಲದನ್ಯ ಸಾಧನವುಂಟೇ , ಎಂದು ತಿಳಿಸಿದ್ದಾರೆ ದ್ವೈತ ಸಿದ್ಧಾಂತದ ತತ್ವಗಳು ವಿಜಯದಾಸರ ಸುಳಾದಿಗಳ ತುಂಬಾ ವಿಜೃಂಭಿಸಿವೆ ಮಧ್ವ ಮತವೇ ಮತವು ಸಕಲ ಶೃತಿ ಸಮ್ಮತವು ಎನ್ನುವ ವಿಜಯದಾಸರು ಹಾಗೂ ಹರಿಕಥಾಮೃತ-ಸಾರ'ದಂತಹ ಮೇರು ಕೃತಿಯ ಮೂಲಕ ಸಕಲ ದ್ವೈತ ಸಿದ್ಧಾಂತದ ಸಾರ ಸರ್ವಸ್ವವನ್ನೂ ನೀಡಿರುವ ಜಗನ್ನಾಥದಾಸರು ಹರಿದಾಸ ಸಾಹಿತ್ಯವನ್ನು ದ್ವೈತ ಸಿದ್ಧಾಂತ ಪ್ರತಿಪಾದನೆಯ ಪ್ರಮುಖ ಮಾಧ್ಯಮವನ್ನಾಗಿ ಮಾಡುವಲ್ಲಿ ಯಶಸ್ವಿಯಾದರು

## ಹರಿದಾಸ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು

ಹರಿದಾಸರು ಓಡಾಡಿದ್ದು ಜನಸಾಮಾನ್ಯರ ನಡುವೆ, ಸಮಾಜದ ಮಧ್ಯೆ

ಇಂತೇ ಅವರು ತಮ್ಮ ಕಾರ್ಯಸಾಧನೆ ಮಾಡಿದರು 'ಮಾನವ ಜನ್ಮ ದೊಡ್ಡದೋ ಇದ ಹಾನಿ ಮಾಡಲುಬೇಡಿ' ಎಂದ ದಾಸರು ಧರ್ಮವೇ ಜಯವೆಂಬ ದಿವ್ಯ ಮಂತ್ರವನ್ನು ಎಲ್ಲರಿಗೂ ಉಪದೇಶಿಸಿದರು ಆವ ಕುಲವವನಾದರೇನು ಆತ್ಮ ಭಾವವ ಅರಿತ ಮೇಲೆ ಎಂದ ದಾಸರು ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣಾ ಎನಬಾರದೇ ಎಂದರು

"ಬಲ್ಲಿದನು ನೀನೆಂದು ಬಡವರ ಬಾಯ ಬಡಿಯದಿರೆಚ್ಚರಿಕೆ, ಮಾಡು ದಾನ ಧರ್ಮ ಪರರುಪಕಾರವ ಮರೆಯದಿರೆಚ್ಚರಿಕೆ' ಅನ್ನದಾನವ ಮಾಡುವರಾಗಿ, ಅನ್ನಛತ್ರವನ್ನಿಟ್ಟವರಾಗಿ ಅನ್ನವಾರ್ತೆಯ ಬಿಟ್ಟವರಾಗಿ—ರಾಗಿಯ ತಂದೀರಾ—ಭಿಕ್ಷಕೆ ರಾಗಿಯ ತಂದಿರಾ ಇವೆಲ್ಲಾ ಬಡಜನರ ಪರವಾಗಿ ದಾಸರು ಸಮಾಜದಲ್ಲಿ ಮೂಡಿಸಿದ ಭಾವನೆಗಳಿಗೆ ಸಾಕ್ಷಿ 'ಚೋರನಾಗಲಿ ಚಂಡಾಲನಾಗಲೀ ಬ್ರಹ್ಮಘ್ನ ಪಿತೃಘಾತಕನಾಗಲೀ ಅವನಾದರೂ ಮಧ್ಯಾಹ್ನ ಕಾಲಕ್ಕೆ ಅತಿಥಿಯಾಗಿ ಮನೆಗೆ ಬಂದರೆ ತುತಿಸಿ ಅನ್ನವನಿಕ್ಕು ಸ್ವಾಮಿ ಪುರಂದರ ವಿಠಲಗರ್ಪಿಸಬೇಕು.' ಇಲ್ಲಿಯ ಉದಾತ್ತ ಮಾನವೀಯ ಭಾವನೆಗಳು ಯಾವ ಕಾಲಕ್ಕೂ ಅನುಕರಣೀಯ

ಪರರಿಗೆ ಉಪದೇಶ ಮಾಡುವ ಪಾಂಡಿತ್ಯ ಪ್ರದರ್ಶನದ ದೃಷ್ಟಿಯಿಂದ ಹೊರಟವ ಹರಿದಾಸರು ತಮ್ಮ ಮಾತುಗಳನ್ನು ಅನುಷ್ಠಾನದ ಮೂಲಕ ಆದರ್ಶ ಮಾಡುತ್ತಿದ್ದರು ತಾವೇ ಸ್ವತ ಸಾಧನೆಯ ಮಾರ್ಗದಲ್ಲಿ ಸಾಗಿ ಸಕಲ ಸಜ್ಜನರನ್ನು ತಮ್ಮೊಡನೆ ಮೇಲೆ ಕರೆದೊಯ್ಯುವ ಆಶಯ ಅವರದು ಎಲ್ಲ ಸಾಧಕರಿಗೂ ಕೈದೀವಿಗೆಯಾಗಬಲ್ಲ ಸಾರ್ವತ್ರಿಕ ಸಂದೇಶಗಳನ್ನು ನೀಡಿದ ದಾಸರು ಮಾನವನಿಗೂ ಪ್ರಾಣಿಗೂ ಇರುವ ವ್ಯತ್ಯಾಸವನ್ನು ತೋರಿಸಿ ಮನುಷ್ಯಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಕರೆ ನೀಡಿದರು ಎಲ್ಲ ವ್ಯಕ್ತಿಗಳಿಗೂ ಅಗತ್ಯವಿರುವ ಗುಣಶೀಲಗಳನ್ನೂ ನೈತಿಕ ಜೀವನದ ಮಹತ್ವವನ್ನು ದಾಸರು ತಿಳಿಸಿದ್ದೇ ಅಲ್ಲದೆ ತಾವೇ ನಡೆದು ತೋರಿಸಿದರು ಪ್ರತಿಯೊಬ್ಬರೂ ಪ್ರಜ್ಞೆಯ ಬೆಳಕಿನಲ್ಲಿ ಓಡಾಡಬೇಕೆಂಬುದು ಅವರ ಆಶಯವಾಗಿತ್ತು ಬಾಳು ಹರಟೆಗೆ ಹೋಗಬೇಡ, ಕಂಡ ಕೂಳುಗಳನು ತಿಂದು ಒಡಲ ಹೊರೆಯಬೇಡ ಕಾಲವ್ಯರ್ಥ ಕಳೆಯಬೇಡ, ನಮ್ಮ ಪ್ರಾರಬ್ಧ ಕರ್ಮಕ್ಕೆ ಮನನೋಯಬೇಡ ಎನ್ನುವ

ದಾಸರು ಮನಸ್ಸನ್ನು, ಬುದ್ಧಿಯನ್ನು ದೇಹವನ್ನು ಕ್ರಿಯಾತ್ಮಕವಾಗಿ ಸ್ವಚ್ಛವಾಗಿ ಇರಿಸುವ ಪರಿಯನ್ನು ತಿಳಿಸಿದ್ದಾರೆ

ಕನಕದಾಸರಂತೂ ತಮ್ಮ ರಾಮಧ್ಯಾನ ಚರಿತೆ'ಯ ಮೂಲಕ ಮಾನವೀಯ ಮೌಲ್ಯಗಳ ಹೊಸ ಸಂಹಿತೆಯೊಂದನ್ನೇ ರಚಿಸಿದರು 'ಆತನೊಲಿದ ಮೇಲೆ ಜಾತಿ ಕುಲವಯ್ಯಾ' ಎನ್ನುವ ಅವರು 'ಕುಲ ಕುಲ ಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಎಂದು ಕೇಳಿ ಜಗವಂತನೆಡೆ ಚಿಂತನೆಗೆ ಮನಸ್ಸನ್ನು ಹಚ್ಚುವಂತೆ ಪ್ರೇರೇಪಿಸಿದರು 'ತಲ್ಲಣಿಸದಿರು ಕಂಡ್ಯ ತಾಳು ಮನವೇ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂದ ಕನಕದಾಸರು ಸಕಲರನ್ನೂ ಸಲಹುವ ಪ್ರೇರಕ ಶಕ್ತಿಯೊಂದಿರುವಾಗ ಯಾರು ನಿರಾಶರಾಗಬೇಕಾಗಿಲ್ಲ, ತಲ್ಲಣಗೊಳ್ಳಬೇಕಾಗಿಲ್ಲ ಎಂಬುವನ್ನು ಸ್ಪಷ್ಟಪಡಿಸಿದರು

"ಒಬ್ಬರ ಕಾಡಿ ಬೇಡಿ ಹಬ್ಬ ಮಾಡಿದುದರಿಂದ ಉಬ್ಬು ತೀರದು ಕಾಣೂ ಅಲ್ಪವಾದ ಧಾನ್ಯ ರುಬ್ಬಿ ಗಂಜಿಯ ಕಾಸಿ ಸತಿಪತಿಯರಿಬ್ಬರೂ' ಆನಂದದಲ್ಲಿ ಪರಸ್ಪರ ಪ್ರೇಮದಿಂದ ಬಾಳುವುದೇ ಹಬ್ಬವೆಂದು ವಿಜಯದಾಸರು ತಿಳಿಸಿ ಕೌಟುಂಬಿಕ ಅನ್ಯೋನ್ಯತೆಯ ಮಹತ್ವವನ್ನು ನಿರೂಪಿಸುತ್ತಾರೆ ಜಗನ್ನಾಥದಾಸರಂತೂ 'ಈಶನಲಿ ವಿಶ್ವಾಸ, ಭಗವದ್ದಾಸರಲಿ ಸಖ್ಯ, ವಿಷಯ ನಿರಾಶೆ, ಮಿಥ್ಯಾವಾದದಲಿ ಪ್ರದ್ವೇಷ ನಿತ್ಯದಲಿ, ಈ ಸಮಸ್ತ ಪ್ರಾಣಿಗಳಲಿ ರಮೇಶನಿಹನೆಂದರಿದು ಅವರವರಭಿಲಾಷೆಗಳ ಪೂರಯಿಸುವುದೇ ಮಹಾಯಜ್ಞ ಹರಿಪೂಜೆ' ಎಂದು ಸಾರಿ ಸಮಸ್ತ ಜೀವಕೋಟಿಯ ಶುಶ್ರೂಷೆ ಮಾಡುವ ಅಗತ್ಯವನ್ನು ಮನಗಾಣಿಸಿದ್ದಾರೆ

## ಹರಿದಾಸ ಸಾಹಿತ್ಯ ಹಾಗೂ ವೈವಿಧ್ಯ

ಕನಕದಾಸರ ಮೋಹನ ತರಂಗಿಣಿ, ಹರಿಭಕ್ತಿಸಾರ, ಜಗನ್ನಾಥದಾಸರ ಹರಿಕಥಾಮೃತಸಾರ ಮುಂತಾದುವು ಹರಿದಾಸ ಕಾವ್ಯಗಳು ಕೀರ್ತನೆಗಳು, ದೇವರ ನಾಮಗಳು, ಸಂಗೀತ ಪ್ರಧಾನ ಸುಳಾದಿ ಉಗಾಭೋಗ, ವೃತ್ತನಾಮ, ಗುಂಡಕ್ರಿಯ, ದಂಡಕ ಇವೆಲ್ಲಾ ದಾಸ ಸಾಹಿತ್ಯದ ವಿಶಿಷ್ಟ ಪ್ರಕಾರ

ಗಳು ರಾಮನ ಕೋಲುಹಾಡು, ಜೋಗುಳ ಲಾಲಿ, ಶೋಭಾನ ಇವೆಲ್ಲಾ ಜನಪದ ಶಿಷ್ಟಲಯದ ಹರಿದಾಸ ಸಾಹಿತ್ಯ

ಹರಿದಾಸ ಸಾಹಿತ್ಯದಲ್ಲಿ ಹರಿಸ್ತುತಿ, ಗುರುಸ್ತುತಿ, ತಾರತಮ್ಯ ಸ್ತೋತ್ರಗಳು ತತ್ತ್ವ ಪದಗಳು ಉಪದೇಶಾತ್ಮಕ ಅನುಭವ ನಿರೂಪಣೆ, ಅನುಭಾವ ಪ್ರಕಟಣೆ, ತೀರ್ಥಕ್ಷೇತ್ರ ಮಹಿಮಾ, ಪುರಾಣ ಪ್ರಸಂಗಗಳು ಮುಂತಾದವು ಕೃತಿಯ ವಸ್ತುಗಳಾಗಿವೆ ವಾತ್ಸಲ್ಯ ಶೃಂಗಾರ, ಮಧುರ, ವಿರಹ, ವಿನೋದ ನಿಂದಾಸ್ತುತಿ ಇವೆಲ್ಲಾ ಹರಿದಾಸರ ಕೃತಿಗಳ ತುಂಬಾ ಹರಡಿವೆ ಕೆಲವು ದಾಸರಂತೂ ಪರಮಾತ್ಮನೊಡನೆ ಜಗಳಕ್ಕೆ ಇಳಿಯುವ ರೀತಿಯಲ್ಲಿ, ಸಂಭಾಷಿಸುವ ರೀತಿಯಲ್ಲಿ ಸಂದರ್ಶಿಸುವ ರೀತಿಯಲ್ಲಿ ಕೃತಿ ರಚಿಸಿದ್ದಾರೆ ಒಂದು ಕಾಲದ ಜನಜೀವನವನ್ನು ಸಮಗ್ರವಾಗಿ ನಿರೂಪಿಸುವ ಐತಿಹಾಸಿಕ - ಸಾಮಾಜಿಕ ವಿವರಗಳೂ ದಾಸರ ಕೃತಿಗಳಲ್ಲಿ ಕಾಣಸಿಗುತ್ತವೆ ಹರಿದಾಸ ಸಾಹಿತ್ಯದ ಭಾಷೆಯೂ ಭಾಷ್ಯಕ್ಕೆ ತಗ ನಿವರ್ಣನವನಿಸುವಂತಿದೆ ಕನ್ನಡವೊಡನೆ ಸಂಸ್ಕೃತ, ತೆಲುಗು, ತಮಿಳು, ಉರ್ದು ಮರಾಠಿ ಭಾಷೆಗಳು ಅನೇಕ ದಾಸರ ಹಾಡುಗಳಲ್ಲಿ ಹಾಸು ಹೊಕ್ಕಾಗಿ ಮೂಡಿಬಂದಿವೆ

## ಹರಿದಾಸ ಸಾಹಿತ್ಯ ಹಾಗೂ ದತ್ತ ಸ್ವಾತಂತ್ರ್ಯ

ದತ್ತ ಸ್ವಾತಂತ್ರ್ಯವು ಹರಿಕಥಾಮೃತಸಾರದಲ್ಲಿ ವಿಶೇಷವಾಗಿ ಚರ್ಚಿತವಾಗಿರುವ ವಿಷಯ ಸ್ವಾತಂತ್ರ್ಯವನ್ನು ಭಗವಂತನಿಂದ ಲೌಕಿಕ ಪದಾರ್ಥದಂತೆ ಬೇಡಿ ಪಡೆಯುವ, ಕೊಂಡುಕೊಳ್ಳುವ ವಸ್ತುವಲ್ಲ 'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ' ಎಂಬಂತೆ ಸ್ವತಃ ಪರಿಪೂರ್ಣನಾದ ಭಗವಂತನು ಜೀವನಿಗೆ ಸ್ವಾತಂತ್ರ್ಯ ಕೊಟ್ಟನೆಂದರೆ ಜೀವನಿಗೆ ಅನಾದಿಸಿದ್ಧವಾದ ತನ್ನ ಪ್ರತಿಬಿಂಬತ್ವವನ್ನು ಆದರ ಧರ್ಮವನ್ನು ಅನುಗ್ರಹಿಸಿದ್ದಾನೆ ಎಂದೇ ತಿಳಿಯಬೇಕು ಭಗವತ್ಪ್ರಸಾದ ರೂಪವಾದ ವಿಹಿತಕರ್ಮಗಳನ್ನು ಮಾಡುತ್ತಾ ತನ್ನ ಸಾಧನ ಪೂರ್ಣಮಾಡಿಕೊಳ್ಳುತ್ತಾ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುವವರ ಮುಕ್ತಿಸಾಧನ ದತ್ತ ಸ್ವಾತಂತ್ರ್ಯ ಕೆರೆಯ ನೀರನು ಕೆರೆಗೆ ಚೆಲ್ಲಿರೋ ಎಂಬಂತೆ ಶ್ರೀ ಹರಿಯಿಂದ ದತ್ತವಾದ ಸಮಸ್ತ ಸುಖಗಳನ್ನು 'ಸಂದೇನದೋ

ಸ್ವಾಮಿ ಎಲ್ಲಾ ನೀನೇ ಅಲ್ಲವೇ ಎಂದು ಅವನಿಗೆ ಅರ್ಪಿಸುವುದಷ್ಟೇ ನಿಜವಾದ ಸ್ವಾತಂತ್ರ್ಯ.

## ಈಸಬೇಕು ಇದ್ದು ಜೈಸಬೇಕು

ಹೇಗೆಯೂ ಈ ಸಂಸಾರದಲ್ಲಿದ್ದರೂ ಇದನ್ನು ಈಜಿ, ಭವಸಾಗರ ದಾಟಬೇಕು ನೀರಮೇಲಣ ಗುಳ್ಳೆಯಂತ ನಿಜವಿಲ್ಲದ ಈ ಸಂಸಾರ ಆಡುವ ಮಕ್ಕಳು ಮನೆ ಕಟ್ಟಿದಂತೆ ಆಟವಾದ ಮೇಲೆ ನಾಕೆಂದು ಮುರಿದೋಡಿದಂತೆ ಅವರ ಆಟ ಆಡುವುದೂ ಸಹಜ ಧರ್ಮ ಹರಿದಾಸರು ಮೂರು ದಿನದ ಈ ಸಂಸಾರ ನಶ್ವರವೆಂದು ಹೇಳಿದರೂ ಸಂಸಾರ ಬಿಟ್ಟು ಪಲಾಯನ ಮಾಡಿರೆಂದು ಉಪದೇಶಿಸಲಿಲ್ಲ ಸಂಸಾರ ಯುದ್ಧಭೂಮಿ ಇದಕ್ಕೆ ಹೆದರಿ ಪಲಾಯನ ಮಾಡದ ಧೀರನಾಗಿ ಅಷ್ಟಮದಗಳನ್ನು ಅಟ್ಟಿ, ಪಾಪ ಕಾರ್ಯಗಳ ಬೆನ್ನಟ್ಟಿ ಆಮಿಷಗಳನ್ನು ಜಯಿಸಬೇಕು ಸಂಸಾರದಲ್ಲೇ ಇದ್ದರೂ ಭಗವದಿಚ್ಛೆಯಿಂದ ಬಂದದ್ದೇ ಪ್ರಾಪ್ತವೆಂದು ತಿಳಿದು, ಲಾಭಾಲಾಭ ಜಯಾಪಜಯಗಳನ್ನು ಸಮಬುದ್ಧಿಯಿಂದ ಸ್ವೀಕರಿಸಬೇಕು ಇದೇ ವಿರಕ್ತಿ ಗೋಪಾಲದಾಸರು ಹೇಳಿದಂತೆ ಹರಿಯ ನೆನೆದು ನನೆದು ದಿನಕಳೆವುದೇ ವೈರಾಗ್ಯ ಅರಿಯದ ವೈರಾಗ್ಯ ಹರಹಿ ಕೊಂಬುವುದಕ್ಕಿಂತ ಅರಿತು ಸೂರ ಹೋಗಿರೋ ಗೋಪಾಲವಿಠಲನ , ಜಾವಕೆ ಮಾಡುವ ಸಾವಿರ ತಪ್ಪುಗಳನ್ನು ತಿದ್ದಿ ಸರಿಹೋಗಬೇಕು ಸಪ್ತ ವ್ಯಸನಗಳನ್ನು ಹೊಡೆದಟ್ಟಿ ಪ್ರವಾಹದ ವಿರುದ್ಧ ಈಸಬೇಕು ಇದ್ದು ಜೈಸಬೇಕು

## ಹರಿದಾಸರು ಹಾಗೂ ಸಮಾಜದ ಸೂಕ್ಷ್ಮ ವೀಕ್ಷಣೆ

ಮಡಿಮಡಿಮಡಿಯೆಂದು ಮೂರ್ವರಾರು ಹಾರುತಿ ಮಡಿಯೆಲ್ಲಿ ಬಂತೋ ಜಕನಾಸಿ, ಮಡಿಯೊಳು ನೀನು ಮೈಲಿಗೆ ನೀನು ಸುಡಲಿ ನಿನ್ನ ಮಡಿ ಜಕನಾಸಿ ಎನ್ನುವ ದಾಸರು ಮಡಿ ಮಾಡುವ ಬಗೆ ಬೇರುಂಟು ಎಂದೂ ತಿಳಿಸಿದ್ದಾರೆ ದಾಸರು ಪರಿಶುದ್ಧ ಅಂತಃಕರಣದ ಪ್ರಾಮಾಣಿಕ ಧರ್ಮವನ್ನು ಎಂದೂ, ಎಲ್ಲೂ ಹೀಗಳೆದಿಲ್ಲ ಆದರೆ ಆಗಂತುಕವಾಗಿ ಬಂದು ಸೇರಿದ ಆಡಂಬರದ, ಬೂಟಾಟಿಕೆಯ ದೋಷಗಳನ್ನು ಮಾತ್ರ ಖಂಡಿಸದೆ ಬಿಟ್ಟಿಲ್ಲ ಉದರ

ವೈರಾಗ್ಯ ಅವರಿಗೆ ಬೇಕಿಲ್ಲ. ಮಡದಿಯೊಡನೆ ನಲಿಯುವಾಗ, ಮಕ್ಕಳಾಡಿಸುವಾಗ, ತಿರುಗಾಡುವಾಗ ಮಾಡುವ ಶ್ರೀಹರಿಯ ಸ್ಮರಣೆಯೇ ಪೂಜೆ. ತಿಳಕೋ ನಿನ್ನೊಳಗೆ ನೀನೇ ಮರುಳೇ ತಿಳಕೋ ನಿನ್ನೊಳಗೆ, ಅಳಕೋ ಪ್ರೋದಾಯುಷ್ಯ, ಕಳಕೋ ದುಷ್ಕರ್ಮ, ನೆಳಕೋ ಇಂದ್ರಿಯಗಳನು ಎನ್ನುವ ದಾಸರು ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ.

## ದಾಸ ಪ್ರತಿಭೆಯ ಮಿಂಚು

ದಾಸರಾಯರಿಗೆ ನಾವೆಲ್ಲ ನಿತ್ಯವೂ ಕಾಣುವ ವಸ್ತುಗಳಲ್ಲೇ ವಿಶೇಷವಾದ ಕಾವ್ಯ ವಸ್ತುವೂ ದೊರಕುತ್ತದೆ. ದಾಸರು ಒಂದು ದೇವಾಲಯದ ಬಳಿ ಬರುತ್ತಾರೆ. ಮಂಗಳಾರತಿ ಸಮಯ, ನಗಾರಿ ಬಾರಿಸುತ್ತಿದೆ. ದಾಸರಿಗೆ ಕಾವ್ಯಸ್ಫೂರ್ತಿ ಬಂತು. 'ಹೊಡಿ ನಗಾರಿ ಮೇಲೆ ಕೈಯ, ಮೃಡವಂದ್ಯನ ಪದ ಬಿಡದೆ ಭಜಿಪರೆಲ್ಲ ಬಿಡಿಸಿ ಪೊರೆವ ಜಗದೊಡೆಯನ ಪರನೆಂದು' ಎಂದು ಘೋಷಿಸುತ್ತಾರೆ. ಮುಂದೆ ಒಂದೆಡೆ ಡಂಗುರದವನೊಬ್ಬ ಡಂಗುರದ ಮೂಲಕ ಯಾವುದೋ ಸುದ್ದಿ ಸಾರುತ್ತಿದ್ದ. "ಡಂಗುರವ ಸಾರಿರಯ್ಯಾ ಡಿಂಗರಿಗರೆಲ್ಲರೂ, ಭೂಮಂಡಲಕ್ಕೆ ಪಾಂಡುರಂಗವಿಠ್ಠಲ ಪರದೈವವೆಂದು" ಎಂದು ಹರಿಸರ್ವೋತ್ತಮತ್ವವನ್ನು ಸಾರುತ್ತಾರೆ. ಅಷ್ಟರಲ್ಲೇ ಬುಡುಬುಡುಕೆಯವನ ಹಕ್ಕಿವಚನ ಕೇಳಿಬರುತ್ತದೆ. ದಾಸರವಾಣಿ ಥಟ್ಟನೆ ನುಡಿಯುತ್ತದೆ "ಜಯವದೆ ಜಯವದೆ ಈ ಮನೆತನಕೆ, ಬುಡುಬುಡು ಬುಡುಬುಡು ಮನಸಂಶಯವ' ಎಂಬ ಸಮಗ್ರ ವ್ಯಾಸಪೂರ್ಣ ಕೃತಿಯ ಅರ್ಥದ ಜಾನಪದ ಮಟ್ಟಿನ ಹಾಡು ಧುಮುಕುತ್ತದೆ. ಕುರಿಕೋಳಿ ಕಡಿಯುತ್ತಾ, ತಾಮಸವಾಗಿ ಊರದೇವರ ಹಬ್ಬ ಆಚರಿಸುತ್ತಿದ್ದುದನ್ನು ನೋಡಿದ ದಾಸರು ಅವರಿಗೆ 'ಊರದೇವರ ಮಾಡಬೇಕಣ್ಣಾ' ಎಂದೇ ಹೇಳಿ, ಆದರೆ ನಾನು ಎಂಬುವ ಹೋತನನ್ನು, 'ದುಷ್ಟತರ್ಕ ವೆಂಬ ಕುರಿಯನ್ನು ಬಲಿಕೊಡಬೇಕೆಂದು ಹೇಳಿ. ಅಹಂಕಾರ ಮಮಕಾರ ಕುತರ್ಕಗಳನ್ನು ಬಿಟ್ಟು ನಿರ್ಮಲ ಮನಸ್ಸಿನಿಂದ ಭಗವಂತನನ್ನು ಧ್ಯಾನಿಸಬೇಕೆಂದು ತಿಳಿಸಿದರು.

ಮುಂದೆ ಒಂದು ಮನೆಯ ಮುಂದೆ ಬಂದರು. ಥಟ್ಟನೆ ಆ ಮನೆಯ

ಮತ್ತು ಅನುಗ್ರಹ ಒಂದಿದ್ದರೆ ಸಕಲವೂ ಸಾಧ್ಯ ಎನ್ನುವ ದಾಸರು “ನವರತ್ನಗಳು ಕಂಡ ಕಂಡ ರಾಶಿಯಲ್ಲುಂಟೆ? ನವವಿಧ ಭಕುತಿಗಳು ಕಂಡ ಕಂಡ ಲ್ಲುಂಟೆ? ದೇವ ನಿನ್ನ ಭಕುತಿ ಕಂಡರೆ ಬಾರದು ಕಲಿತರೆ ಬಾರದು ಪುರಂದರ ವಿಠಲ ನಿನ್ನ ದಯವಾಗದತನಕ' ಎಂದು ಹರಿಯ ಅನುಗ್ರಹಕ್ಕೆ ಮೊರೆಬಿದ್ದಿದ್ದಾರೆ ಅದಕ್ಕಾಗಿ “ಶ್ರವಣಮನನಕಾನಂದವೀವುದು ಭವಜನಿತ ದುಃಖಗಳ ಕಳೆವುದು” ದಾಸರು ನುಡಿದರು “ಹರಿಕಥಾ ಶ್ರವಣ ಮಾಡೋ ನಿರಂತರ ಇದರೆ ಸಕಲ ಸಾಧನಗಳಿದ್ದೂ ಪರಮಾತ್ಮನ ಪ್ರೀತಿಯಿಲ್ಲದಿದ್ದರೆ “ಕೇಳನೋ ಹರಿ ತಾಳನೋ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ಎಂದು ಹೇಳಿ ದಾಸರು ‘ಅಡಿಗಡಿಗಾನಂದಭಾಷ್ಪ ಪುಳಕದಿಂದ ನುಡಿನುಡಿಗೆ ಶ್ರೀ ಹರಿ ಯನ್ನುತಾ ದೃಢಭಕ್ತರನು ಕೂಡಿ ಹರಿಕೀರ್ತನ ಮಾಡಿ ಕಡೆಗೆ ಪುರಂದರವಿಠಲ ನಂದರೆ ಕೇಳ್ವ' ಎಂದು ಭಗವತ್ಪ್ರೀತಿಯಲ್ಲಿ ಭಕ್ತಿಯ ಆವೇಶವಿರಬೇಕೆಂದು ನುಡಿದಿದ್ದಾರೆ ‘ದಾಸನಾದವಗೆ ವೈಕುಂಠದಲ್ಲಿ ವಾಸ, ದಾಸನಾಗದವನಲ್ಲಿ ಪ್ರೇತರಾಭಾಸ” ಎನ್ನುವ ದಾಸರು ದಾಸ ಜನರ ಪ್ರಿಯ ವಿಜಯವಿಠಲ ರಾಯನ ದಾಸನಾದವನಿಗೆ ಆವುದು ಕೊರತೆ ಕಾಣ ಎಂದರು “ಜಿಹ್ವೆಶ್ರೀ ಪುರಂದರವಿಠಲರಾಯನ ಒಲ್ಲವರಿಗಲ್ಲಮಾಡೋ ದಾವಪ್ರಾಣದ ದೇವ ‘ವಿಧಿ ನಿಷೇಧ ನಿನ್ನ ಮರೆಗಿಂತೋ ಹರಿಯೇ, ವಿಧಿ ನಿನ್ನ ಸ್ಮರಣೆ, ನಿಷೇಧ ನಿನ್ನ ವಿಸ್ಮೃತಿ ಯೆಂಬ ವಿಧಿಯೊಂದನು ಬಲ್ಲೆನಲ್ಲದೆ ಮತ್ತೊಂದಿಲ್ಲ ಸದಾ ನನ್ನ ಹೃದಯ ದಲ್ಲಿ ವಾಸ ಮಾಡೋ ಶ್ರೀಹರಿ ಎಂದು ಪ್ರಾರ್ಥಿಸುವ ದಾಸರು ಬದುಕಿನ ಸಾರ್ಥಕತೆಯನ್ನು ಹೇಳುತ್ತಾರೆ ಹೃದಯದಿ ರೂಪವು ವದನದಿ ನಾಮವು ಉದರದಿ ನೈವೇದ್ಯವು ಶಿರದಿ ಪದಜಲನಿರ್ಮಾಲ್ಯ ಧರಿಸುತ ಕೋವಿದರ ಸದನ ಪೊಗ್ಗದವ ಕಾಯುವುದು ಫಲವಿದು ಬಾಳ್ದುದಕೆ ಎಂದು ತಿಳಿಸಿದರು

‘ತಲ್ಲಣಿಸದಿರು ಕಂಡ್ಯ ತಾಳು ಮನವೆ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ಎಂದು ಕನಕದಾಸರು ಹೇಳಿದ್ದನ್ನೇ “ಕಷ್ಟ ಸಂದೆನಲೇಕೆ ಕ್ಲೇಶ ಪಡಲೇಕೆ ಹೊಟ್ಟೆಗೋಸುಗ ನಂದ ಕಷ್ಟ ಪಡಿಸಲೇಕೆ, ಹುಟ್ಟಿಸಿದ ದೇವ ಹುಲ್ಲು ಮೇಯಿಸುವನಲ್ಲ, ಬೆಟ್ಟದೊಳಿದ್ದರೇನು ವನದೊಳಿದ್ದರೇನು, ಭಟ್ಟಾಗಿ ನಲ

ಸಿಂದನ – ಚಂದ್ರನನ್ನು, ಚಂದದಿ ಪಡೆದನ – ಸಮುದ್ರರಾಜನ, ಸಂದನಿಯಳ – ಮಗಳಾದ ಲಕ್ಷ್ಮೀದೇವಿಯನ್ನು, ಧರಿಸಿದ ಮುಕುಂದನಿಗೆ – ಪರಮಾತ್ಮನಿಗ ಮಂಗಳ

ರಥವನಡರಿ ಸುರಪಥದಿ ತಿರುಗುವ – ಸೂರ್ಯನ, ಸುತನಿಗ – ಕರ್ಣನಿಗೆ, ಶಾಪವನಿತ್ತವನ – ಪರಶುರಾಮದೇವರ ಕ್ಷತ್ರಿಯರ ತರಿದವ – ರಾಮದೇವರ, ಸತಿಯು – ಸೀತೆಯು, ಜನನಿ – ಭೂದೇವಿಯು, ಸುತ – ನರಕಾಸುರನ ಸತಿಯರ ನಾಥ – ಕೃಷ್ಣನಿಗ ಮಂಗಳ

ಹರಿಯು – ಸೂರ್ಯನ, ಮಗನ – ಕರ್ಣನ, ಶಿರತರಿದನ – ಅರ್ಜುನನ ತಂದೆಯು – ಪಾಂಡುವಿನ, ಹಿರಿಯ ಮಗನ – ಧರ್ಮರಾಜನ, ತಮ್ಮನ – ಭೀಮನ, ಪಿತನ – ತಂದೆಯಾದ ವಾಯುದೇವರ, ಭರದಿ ಬುಜಿಸಿದನ – ಕಾಳಿಂಗ ಸರ್ಪನ (ವಾಯು ಭಕ್ಷಕನಾದ) ಶಿರದಲಿ ನಟಿಸಿದ – ಕೃಷ್ಣನಿಗೆ ಮಂಗಳ

ಗುರು ಗೋಪಾಲದಾಸರ ಇದೇ ರೀತಿಯ ಇನ್ನೊಂದು ಮುಂಡಿಗ

“ಅಂಧಕನನುಜನ ಕಂದನ ತಂದೆಯ ತಿಂದನ ವೈರಿಯ ಅನುಜನ್ನೊಂದೆ ನಿಂದನ ಕಂದನ ಕೊಂದನ ತಂದೆಯ ತಂದೆ ತಂದೆ ತಂದ ತಂದೆಯನಾದಾ ’

ಅಂಧಕ ಧೃತರಾಷ್ಟ್ರನ, ಅನುಜನ ಪಾಂಡುವಿನ, ಕಂದನ ಭೀಮನ ತಂದೆಯು ವಾಯುವಿನ, ತಿಂದನ ಸರ್ಪ (ವಾಯುಭಕ್ಷಕ) ವೈರಿ ಗರುಡ, ಅನುಜ ತಮ್ಮನಾದ ಅರುಣನ, ಹಿಂದೆ ನಿಂದನ ಸೂರ್ಯನ, ಕಂದನ ಕರ್ಣನ, ಕೊಂದನ ಅರ್ಜುನನ ತಂದೆಯು ಇಂದ್ರನ ತಂದೆ ಕಶ್ಯಪ ತಂದ ಮರೀಚಿ ತಂದೆ ಬ್ರಹ್ಮ, ತಂದ ಕೃಷ್ಣ

ಕನಕದಾಸರ ಮುಂಡಿಗಗಳಲ್ಲಿ ಶಬ್ದ, ಚಮತ್ಕಾರ, ನಿಗೂಢ ಘಟನೆಗಳು, ಬೆಡಗಿನ ವಚನಗಳಾಗಿ ಅರಳಿಕೊಳ್ಳುತ್ತವೆ ಪುರಾಣ ಪ್ರಪಂಚಕ್ಕೆ ಸಂಬಂಧಿಸಿದ ವಿವಿಧ ವ್ಯಕ್ತಿ ಘಟನೆಗಳನ್ನಾಧರಿಸಿ ಅವರು ಹರಿ ಸರ್ವೋತ್ತಮತ್ವವನ್ನು ಸಮರ್ಥಿಸುವ ವೈಖರಿ ವಿಶಿಷ್ಟವಾದುದು

ಬಾಯೊಳಗಿಹ[1] ಗಂಡನ[2] ನಿಜ ತಮ್ಮನ[3]
ತಾಯಿ[4] ಪಿತನ[5] ಮಡದಿಯ[6] ಧರಿಸಿದನ[7]
ಸ್ತ್ರೀಯ[8] ಸುತನ[9] ಕೈಯಲಿ ಶಾಪ ಪಡೆದನ[10]
ದಾಯಾದ್ಯನ[11] ಮಗನ[12]
ನಾಯಕವದು[13] ತೀವ್ರದಿ ಬರುತಿರೆ ಕಂಡು
ಮಾಯಾಪತಿ[14] ಭೂಮಿಯನೊತ್ತಿ ತನ್ನಯ
ಜೀಯಮಗನ[15] ತಲೆ ಗಾಯಿವಂಥ
ರಾಯನ ಕರೆದು ತೋರೆ
ನಾಲಗೆ ಎರಡರವನ[16] ಭುಂಜಿಸುವನ[17]
ಮೇಲೇರಿಬಹನ[18] ತಂದೆಯು[19] ಇಹಗಿರಿಯನು[20]
ಲೀಲೆಯಿಂದಲಿ ಕಿತ್ತೆತ್ತಿದ ಧೀರನ[21]
ಕಾಳಗದಲ್ಲಿ[22] ಕೊಂದನ
ಲೋಲ ಲೋಚನೆಯ[23] ಮಾತೆಯ[24] ಪುತ್ರ[25] ಮಗನ[26]
ಮೇಲುಶಕ್ತಿಗೆ[27] ಉರವಾಂತು[28] ತನ್ನವರನ್ನು[29]
ಪಾಲಿಸಿದಂಥ ದಾತನಹ ದೇವನ ಲೋಲೆ ನೀ ಕರೆದು ತೋರೇ

ವಿಜಯದಾಸರ ಒಂದು ಇದೇ ಸುಳಾದಿಯೇ ಮುಂಡಿಗೆಯಂತಿದೆ ಹರಿದಾಸ ಸುಳಾದಿ ಒಂದೇ ಖ್ಯಾತವಾದ ಈ ಕೃತಿ ಸುಳಾದಿ ಮುಂಡಿಗೆ ಹಾಗೂ ಜ್ಞಾನದ ವಿಸ್ತಾರಕ್ಕೆ ಪೂರ್ಣ ಪ್ರಮಾಣದ ನಿದರ್ಶನವಾಗಿದೆ

---

1 ಸರಸ್ವತಿ 2 ಬ್ರಹ್ಮ, 3 ಕಾಮ, 4 ಲಕ್ಷ್ಮಿ, 5 ಸಮುದ್ರರಾಜ 6 ಗಂಗೆ 7 ಈಶ್ವರ 8 ಪಾರ್ವತಿ, 9 ವಿಘ್ನೇಶ್ವರ, 10 ಚಂದ್ರ 11 ರವಿ, 12 ಕರ್ಣ, 13 ನಾಗಾಸ್ತ್ರ, 14 ಕೃಷ್ಣ, 15 ಪಾರ್ಥ, 16 ಸರ್ಪ 17 ಮಯೂರ, 18 ಷಣ್ಮುಖ, 19 ಈಶ್ವರ, 20 ಕೈಲಾಸಾದ್ರಿ, 21 ರಾವಣ 22 ರಾಮಚಂದ್ರ, 23 ಜಾನಕಿ, 24 ಭೂದೇವಿ, 25 ನರಕಾಸುರ, 26 ಭಗದತ್ತ 27 ನಾರಾಯಣಾಸ್ತ್ರ, 28 ಶ್ರೀ ಕೃಷ್ಣ, 29 ಪಾಂಡವರು

ಪರಿಹಾಸನಾಗಿ ಸಂಚರಿಸು ಸಂತೋಷದಲ್ಲಿ
ಗುರುಹಿರಿಯರಪಾದಕ್ಕೆರಗು ಬಿಡದ

ಎರಡೊಂದು ತಿಳಿದು (ಜ್ಞಾನ ಭಕ್ತಿ. ವೈರಾಗ್ಯ)
ಮತ್ತೆರಡೊಂದು ಅಳಿದು (ಈಷಣತ್ರಯ —ದಾರಾ. ಸುತ. ವಿತ್ತ)
ಎರಡೊಂದು ಸಂಪಾದಿಸು (ಶ್ರವಣ, ಮನನ ಧ್ಯಾನ)
ಎರಡೊಂದು ಶುದ್ಧಿಯಿರಿ (ತ್ರಿಕರಣ —ಕಾಯ ವಾಕ್ ಮನಸ್ಸು)
ಎರಡೊಂದು ಸೈರಿಸು (ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ತಾಪಗಳು)
ಎರಡೊಂದು ಕಾಲದಲಿ (ತ್ರಿಕಾಲ —ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲ)
ಎರಡೊಂದು ಗುಣಗಳಿಗ (ತ್ರಿಗುಣ —ಸತ್ವ ರಜಸ್ಸು ತಮಸ್ಸು)
ಎರಡೊಂದು ರೂಪ ನೆನೆದು (ವಿಶ್ವ ತೈಜಸ. ಪ್ರಾಜ್ಞ)
ಎರಡೊಂದು ಲೋಕವನ್ನು (ಸ್ವರ್ಗ. ಮರ್ತ್ಯ, ಪಾತಾಳ)
ಎರಡೊಂದು ಮಾಳ್ಪನ್ನ (ಸೃಷ್ಟಿ ಸ್ಥಿತಿ. ಸಂಹಾರ)
ಎರಡೊಂದು ಅವಸ್ಥೆಯಲಿ (ಜಾಗರ ಸ್ವಪ್ನ ಸುಷುಪ್ತಿ)
ಎರಡೊಂದು ಕಾಯ ನೋಡು (ಸ್ಥೂಲ. ಸೂಕ್ಷ್ಮ. ಸ್ವರೂಪ)
ಎರಡೊಂದು ಕರ್ಮ ಕಳೆದು (ಸಂಚಿತ, ಆಗಾಮಿ ಪ್ರಾರಬ್ಧ)
ಎರಡೊಂದು ಅಕ್ಷರಂಗಳ (ಅಕಾರ ಉಕಾರ. ಮಕಾರ = ಓಂ)
ಎರಡೊಂದು ಸಾರಿ ನೆನೆದು (ತ್ರಿಕಾಲಜಪ—ಪ್ರಾತಃ. ಮಧ್ಯಾಹ್ನ ಸಾಯಂ)
ಎರಡೊಂದು ಸ್ಥಾನ ಸೇರು (ಶ್ವೇತದ್ವೀಪ ಅನಂತಾಸನ ವೈಕುಂಠ)
ಎರಡೊಂದು ಗುಣರೂಪ ವಿಜಯವಿಠಲ ಪರಿಯ (ತ್ರಿಗುಣಾತೀತ ಸಾದಪ ಸತ್ವರಜತಮೋಗುಣದೂರ)
ಎರಡೊಂದು ರೂಪ ಭಜಿಸು (ಅಗ್ರದ ಮೂಲದ. ಪ್ರಾದೇಶ)
(ಸಾಮಾನ್ಯಾಪರೋಕ್ಷ ಸ್ಥೂಲಾಪರೋಕ್ಷ . ಬಿಂಬಾಪರೋಕ್ಷ)
ಎರಡೊಂದು ಅವತಿನ ಸ್ಥಾನ (ಅಂಗುಲ ಅಂಗುಷ್ಠ ಅಂಗುಲಾಗ್ರ)

—೦—

ಮೂರೊಂದು ಯುಗದಲ್ಲಿ (ಕೃತ ತ್ರೇತಾ ದ್ವಾಪರ ಕಲಿ)

ಮೂರೊಂದು ವರ್ಣದ (ಶ್ವೇತ ರಕ್ತ, ಪೀತ ನೀಲ)

ಮೂರೊಂದು ಕಡ ಬಿಂಬ (ಸ್ವರೂಪ ಲಿಂಗ ಸ್ಥೂಲ ಸೂಕ್ಷ್ಮ)

ಮೂರೊಂದು ಆಗಿ ಬಜನು (ಸತ್ ಚಿತ್ ಆನಂದ ಆತ್ಮಾನಂದು)

ಮೂರೊಂದು ಪುರುಷಾರ್ಥ (ಧರ್ಮ ಅರ್ಥ ಕಾಮ, ಮೋಕ್ಷ)

ಮೂರೊಂದ್ಬಾಗಿ ಬೇದ (ಸಾರೂಪ್ಯ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ)

ಮೂರೊಂದು ಮೊಗಸ್ಥೆಯು ವಿಜಯವಿಠಲರೇಯನ (ಚತುರ್ಮುಖ, ಬ್ರಹ್ಮನ ತಂದ ಶ್ರೀ ಹರಿಯು)

ಮೂರೊಂದುದಾಯದಲಿ (ನಾಮ ದಾನ ಭೇದ ದಂಡ)

ಮೂರೊಂದು ಪ್ರಳಯ ದಾಳ್ಗ (ದಿನಪ್ರಳಯ ಯುಗಪ್ರಳಯ ಮನುಪ್ರಳಯ, ಮಹಾಪ್ರಳಯ)

ನಾಲ್ಕೊಂದು ಬೇದವ ಆದಲ್ಲಿ ನಿಜವೆಂದು (ದಂಚಭೇದ–ಜೀವಜೀವಕ್ಕೆ ಭೇದ ಜಡಜಡಕ್ಕೆ ಬೇದ, ಜೀವಜಡಬೇದ ಜೀವಪರಮಾತ್ಮ ಭೇದ ಜಡ ಪರಮಾತ್ಮ ಭೇದ)

ನಾಲ್ಕೊಂದು ಆತ್ಮಕವಾದ ಭೂದಸ್ಥಾಂಡವ (ಪಂಚಭೂತ—ಪೃಥ್ವಿ, ಅಪ್ ತೇಜಸ್ಸು ವಾಯು ಆಕಾಶ)

ನಾಲ್ಕೊಂದು ಬಗೆಯವರು ಯೋಗ್ಯವಂತರು ಎಂದು (ದೇವ ಋಷಿ, ಪಿತೃ ಚಕ್ರವರ್ತಿ ಮನುಷ್ಯ)

ನಾಲ್ಕೊಂದು ಸಂಪದವಿ ಇದ್ದಾದಂದು (ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಸಾರ್ಷ್ಟಿ)

ನಾಲ್ಕೊಂದು ಪರ್ವದಲಿ ತಿರುಗದಲ (ಅಜ್ಞಾನ ಮೋಹ ಮಹಾಮೋಹ ತಾಮಿಸ್ರ ಅಂಧತಾಮಿಸ್ರ)

ನಾಲ್ಕೊಂದು ಊರ್ಧ್ವಪುಂಡ್ರ ಮುದ್ರೆಗಳನ ಧರಿಸು (ಉದಕ ಮೃತ್ತಿಕ ಗೋಪೀಚಂದನ ಗಂಧ ಅಂಗಾರ)

ನಾಲ್ಕೊಂದು ಯಜ್ಞವ ತಿಳಿದು ಮಾಡು (ಬ್ರಹ್ಮಯಜ್ಞ. ಪಿತೃಯಜ್ಞ ಹಾರ. ವೈಶ್ವದೇವ. ಬಲಿಹರಣ)

ನಾಲ್ಕೊಂದು ಇಂದ್ರಿಯಗಳ ಬಂಧನ ಮಾಡು (ಶ್ರವಣ, ಚಕ್ಷು. ಘ್ರಾಣ, ಸ್ಪರ್ಶ, ಜಿಹ್ವೆ)

ನಾಲ್ಕೊಂದ್ಹಾದಿಗೆ ಎರಗದಿರು (ಶಬ್ಧ. ರೂಪ, ಸ್ಪರ್ಶ ಗಂಧ. ರಸ)

ನಾಲ್ಕೊಂದಾಪರಪಾಲ (ಮುಕ್ತರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಾಮಸರು, ತಮೋಯೋಗ್ಯರು) —ಪರಮಾತ್ಮನ ಬಲಪಕ್ಷದಲ್ಲಿ ಮುಕ್ತರು, ಎಡ ಪಕ್ಷದಲ್ಲಿ ಮುಕ್ತಿ ಯೋಗ್ಯರು, ನಾಭಿಯಲ್ಲಿ ನಿತ್ಯಸಂಸಾರಿಗಳು ನಾಭಿಯ ಅಧೋ ಭಾಗದಲ್ಲಿ ತಾಮಸರು, ಎಡಗಡೆ ತಮೋಯೋಗ್ಯರಾದ ಕಲಿ ಆದಿಗಳು)

ನಾಲ್ಕೊಂದು ಬಿಡಿಸುವ ವಿಜಯವಿಠಲರೇಯ (ಪಂಚಭೂತಾತ್ಮಕ ವಾದ ಪ್ರಪಂಚ ಬಿಡಿಸುವ)

ನಾಲ್ಕೊಂದು ಕೊಡುವನು (ಪಂಚವಿಧ ಮುಕ್ತಿಯಲ್ಲಿ ಯೋಗ್ಯತೆಯ ರಿತು ಒಂದನ್ನು ಕೊಡುವನು)

ಐದೊಂದು ರಿಪುಗಣ ಪ್ರತಿದಿನದಿ ಮುಗ್ಗಿಸು (ಕಾಮ, ಕ್ರೋಧ, ಲೋಭ. ಮೋಹ, ಮದ, ಮತ್ಸರ)

ಐದೊಂದು ಕರ್ಮವ ಮಾಮತಿರು (ಯಜನ, ಯಾಜನ. ಅಧ್ಯಯನ ಅಧ್ಯಾಪನ, ದಾನ, ಪ್ರತಿಗ್ರಹ)

ಐದೊಂದು ಮತಕ್ಕೆ ನಮ್ಮ ಮತ ಅಧಿಕವೆನ್ನು (ವೈಷ, ಸೂರ್ಯ. ಗಣಪತಿ, ಅಗ್ನಿ, ಶಕ್ತಿ, ಅದ್ವೈತ)

ಐದೊಂದು ರುಚಿ ಜಡು. ಪರಿಣಾಮ ರುಚಿಯೆನ್ನು (ಉಪ್ಪು, ಹುಳಿ, ಒಗರು ಕಹಿ, ಸಿಹಿ)

ಐದೊಂದು ರಥಿಕರ ಜರಿದ ವಿಜಯ ವಿಠ್ಠಲನ್ನ (ಭೀಷ್ಮ, ದ್ರೋಣ ಕೃಪ, ಅಶ್ವತ್ಥಾಮ, ಶಲ್ಯ, ಕರ್ಣ)

ಐದೊಂದು ಸ್ಥಳದಲ್ಲಿ ತಿಳಿದು ನಿರ್ಮಲನಾಗು (ಮೂಲಾಧಾರಕಮಲ, ನಾಭೀಕಮಲ ಹೃದಯಕಮಲ, ತುಂದಿಕಮಲ ಕಂಠಪ್ರದೇಶ ಕಮಲ ಭ್ರೂಮಧ್ಯಕಮಲ)

ಆರೊಂದು ಜನವುಳ್ಳ ಗ್ರಾಮ ನಿನ್ನದಲ್ಲ (ತ್ವಕ್, ಚರ್ಮ ಮಜ್ಜ, ಮಾಂಸ ರುದಿರ ಮೇದಸ್ಸು, ಅಸ್ಥಿ)

ಆರೊಂದಂಬುಧಿಯಷ್ಟು ಕರ್ಮ ನಿನ್ನದು (ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ. ಸ್ವಾದೋದಕ, ಲವಣ)

ಆರೊಂದವರ ಕೇಳಿ ತಿಳಿದುಕೊಳ್ಳು (ಸಪ್ತ ಋಷಿಗಳು—ಕಶ್ಯಪ, ಅತ್ರಿ, ಭಾರದ್ವಾಜ. ವಿಶ್ವಾಮಿತ್ರ ಗೌತಮ ವಸಿಷ್ಠ, ಜಮದಗ್ನಿ)

ಆರೊಂದು ದ್ವೀಪ ಆಳಿದವರು (ಸಪ್ತ ದ್ವೀಪಗಳು—ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ ಪುಷ್ಕರ ಸಪ್ತ ದ್ವೀಪಾಧಿಪತಿಗಳು—ಪ್ರಿಯವ್ರತನ ಮಕ್ಕಳು = ಗಂಧ, ಇಂದ್ರ, ಜಿಹ್ವ ಹಿರಣ್ಯರೋಮ, ಘೃತ ಪೃಷ್ಠ, ಮೇದಾತಿಥಿ, ಯಜ್ಞಬಾಹು)

ಆರೊಂದು ಹಯಸ ಕಾಲಕೆ ಎದ್ದು (ಹಿ—ಕಿಸೇ ಪ್ರಹರರಾತ್ರಿಯಿರು ವಾಗಲೇ ಎದ್ದು)

ಆರೊಂದು ಕರ್ಮವ ಮಾಡು (ಸ್ನಾನ, ಸಂಧ್ಯಾವಂದನ, ನಿತ್ಯ, ನೈಮಿತ್ತಿಕ, ದೇವತಾರ್ಚನ. ಅತಿಥಿಪೂಜ, ಅಭ್ಯಾಗತ ಪೂಜ)

ಆರೊಂದು ಜಿಹ್ವೆಗೆ ಉಣಿಸಬೇಕು (ಅಗ್ನಿದೇವನಿಗ)

ಆರೊಂದು ಗೋತ್ರ ಉದ್ಧಾರ ಮಾಡುವ (ಸ್ವಗೋತ್ರ, ಸೋದರ-ಮಾವನ ಗೋತ್ರ, ಭಾವ ಮೈದುನನ ಗೋತ್ರ, ತಾಯಿಯ ಒಡಹುಟ್ಟಿದ ಸ್ತ್ರೀಯರ ಗೋತ್ರ, ತಂದೆಯ ಒಡಹುಟ್ಟಿದವರ ಸ್ತ್ರೀಯರ ಗೋತ್ರ, ತನ್ನ ಒಡಹುಟ್ಟಿದ ಸ್ತ್ರೀಯರ ಗೋತ್ರ, ಮಗಳ ಗೋತ್ರ)

ಆರೊಂದು ಅಂಗವುಳ್ಳ ವಿಜಯ ವಿಠಲ ಧರಿಸು (ನವಾಂಗ—ಶಿರ,

ವಾರ, ನಕ್ಷತ್ರ, ಯೋಗ ಭದ್ರ ಕರಣ, ಐದು ಇವುಗಳಿಗೆ ನಿಯಾಮಕರೂಪ ಉಳ್ಳ)

ಆರೊಂದು ವಾರದೊಳು ವಿವಿಧ ದಾನಸಾಗು (ರವಿ ಆದಿ ಏಳು ವಾರಗಳು)

ಏಳೊಂದು ಪಾಲಕರ ತಿಳಿ (ಇಂದ್ರ, ಅಗ್ನಿ, ಯಮ, ನಿರುತಿ ವರುಣ ವಾಯು, ಕುಬೇರ ಈಶಾನ್ಯ)

ಏಳೊಂದು ದಳದಲ್ಲಿ ಭಗವದ್ರೂಪ ತಿಳಿಯಬೇಕು (ಅಷ್ಟದಳಪದ್ಮ)

ಏಳೊಂದು ಮೂರ್ತಿಯ ಚಿಂತನೆ ಮಾಡು (ಶ್ರೀರಂಗನಾಥ. ವರಾಹ ಶ್ರೀನಿವಾಸ ಸಾಲಿಗ್ರಾಮ. ವೇದವ್ಯಾಸ ಕೃಷ್ಣ, ಪದ್ಮನಾಭ ನಾರಾಯಣ)

ಏಳೊಂದು ದಂತಿಗಳ ತಿಳಿಯಬೇಕು (ಐರಾವತಾದಿ ಅಷ್ಟದಿಗ್ಗಜಗಳು)

ಏಳೊಂದು ಭೂತಿಯುಳ್ಳ ವಿಜಯ ವಿಠಲನ ಮಹಿಮೆ ತಿಳಿ (ಅಣಿಮಾ, ಮಹಿಮಾ, ಗರಿಮಾ ಲಘಿಮಾ ಪ್ರಾಪ್ತಿ, ಪ್ರಾಕಾಮ್ಯ. ಈಶತ್ವ ಐಶ್ವರ್ಯ)

ಎಂಟೊಂದು ಗ್ರಹಗಳ ತಿಳಿಯಬೇಕು (ರವಿಯಾದ ನವಗ್ರಹಗಳು)

ಎಂಟೊಂದು ಸೃಷ್ಟಿಯ ತಿಳಿಯಬೇಕು (೧. ಅಂಡಜ ೨. ಸ್ವೇದಜ ೩. ಉದ್ಭಿಜ)

ಎಂಟೊಂದು ಪ್ರಜೇಶ್ವರರ ತಿಳಿಯಬೇಕು (ಮರೀಚಿ ಅತ್ರಿ ಅಂಗೀರಸ ಪುಲಸ್ತ್ಯ ಪುಲಹ ಕ್ರತು ವಸಿಷ್ಠ ದಕ್ಷ ಭೃಗು)

ಎಂಟೊಂದು ಕೋಟಿ ರೋಮಗಳಲ್ಲಿ (ಒಂಭತ್ತು ಕೋಟಿ ರೋಮಗಳಲ್ಲಿ)

ಎಂಟೊಂದು ಶಕ್ತಿಯುಳ್ಳ (ನವಶಕ್ತಿ—ವಿಮಲ ಉತ್ಕರ್ಷಣೆ ಜ್ಞಾನ ಕ್ರಿಯಾ ಯೋಗ ಸತ್ಯ. ಈಶಾನ, ಪ್ರಹ್ವಿ ಅನುಗ್ರಹ)

ಎಂಟೊಂದು ಭಕ್ತಿ ತಿಳಿಯಬೇಕು (ನವವಿಧ ಭಕ್ತಿ—ಶ್ರವಣ, ಕೀರ್ತನ ಸ್ಮರಣ ಪಾದಸೇವನ, ಅರ್ಚನ ವಂದನ. ದಾಸ್ಯ, ಸಖ್ಯ ಆತ್ಮನಿವೇದನ)

ನವವಿಧ ಭಕ್ತಿಯಲ್ಲಿ ಪ್ರತ್ಯೇಕ ಪ್ರತ್ಯೇಕರಾಗಿ ಪ್ರಸಿದ್ಧರಾದವರು—ಪರೀಕ್ಷಿತ, ನಾರದ ಅಜಾಮಿಳ, ಧ್ರುವ ಬ್ರಹ್ಮ, ಮುಚುಕುಂದ ಹನುಮ ಅರ್ಜುನ, ಬಲಿ)

ಎಂಭತ್ತೊಂದು ಕಡಯಲ್ಲಿರುವ ವಿಜಯ ವಿಠಲನ ಎಂಟು ಮೂರ್ತಿಗಳ ತಿಳಿಯಬೇಕು—

(ಮೇರು ಪರ್ವತದ ಸುತ್ತಲೂ ನವದ್ವೀಪಗಳಲ್ಲಿಯೂ ಉಪಾಸನೆ ಮಾಡತಕ್ಕವರು ಮತ್ತು ಉಪಾಸನಾ ಸ್ವರೂಪಗಳು—ಭರತ ಖಂಡದಲ್ಲಿ ನಾರದರು ನರನಾರಾಯಣ ದೇವರನ್ನೂ, ಕಿಂಪುರುಷ ಖಂಡದಲ್ಲಿ ಹನುಮಂತನು ರಾಮದೇವರನ್ನೂ ಹರಿವರ್ಷ ಖಂಡದಲ್ಲಿ ಪ್ರಹ್ಲಾದನು ನರಸಿಂಹ ದೇವರನ್ನೂ ಇಳಾವೃತ ಖಂಡದಲ್ಲಿ ಪಾರ್ವತೀಪತಿಯು ರುದ್ರಾಂತರ್ಗತ ಸಂಕರ್ಷಣ ದೇವರನ್ನೂ ಕೇತುಮಾಲಾ ಖಂಡದಲ್ಲಿ ರತೀದೇವಿಯು ಪತಿಯು ಕಾಮಾಂತರ್ಗತ ಪ್ರದ್ಯುಮ್ನ ದೇವರನ್ನೂ ಹಿರಣ್ಮಯ ಖಂಡದಲ್ಲಿ ಪಿತೃಪರು ಕೂರ್ಮ ದೇವರನ್ನೂ ಕುರುಖಂಡದಲ್ಲಿ ಭೂದೇವಿಯು ವರಾಹದೇವರನ್ನೂ ಉಪಾಸನೆ ಮಾಡುತ್ತಾರೆ)

ಜತ

ಕೊಡಬ್ಯಾಡ ಕೊಳಬ್ಯಾಡ ವಿಜಯವಿಠಲನ<br>
ಅಡಿಗಳರ್ಚನೆಯಿಂದ ನಂಬಲು ಕೈವಲ್ಯ

## ಪ್ರಾರಂಭಿಕ ಪುರುಷರು

ಹರಿದಾಸ ಸಾಹಿತ್ಯ ಮಧ್ವಾಚಾರ್ಯರಿಂದ ಪ್ರೇರಣೆ ಪಡೆದರೂ, ಪ್ರಾರಂಭ ಪಡೆದದ್ದು ಅವರ ಸಾಕ್ಷಾತ್‌ಶಿಷ್ಯರಾದ ನರಹರಿ ತೀರ್ಥರಿಂದ ಎಂದೇ ಸಂಪ್ರದಾಯ 'ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯರ ಸಮುದಾಯವು ನರಹರಿ ತೀರ್ಥರ ನೇತೃತ್ವದಲ್ಲಿ ಪ್ರಕಟಿಸಿದ ಹರಿದಾಸವಾಙ್ಮಯವೇ ದಾಸ

ಸಾಹಿತ್ಯದ ಪ್ರಥಮಘಟ್ಟ.[1] "ಮಧ್ವಾಚಾರ್ಯರಿಂದ ಮೂರನೆಯ ಪಟ್ಟದ ಸ್ವಾಮಿಗಳಾದ ನರಹರಿ ತೀರ್ಥರು ಈ ಪರಂಪರೆಯಲ್ಲಿ ಅತ್ಯಂತ ಪ್ರಾಚೀನರು, ಅವರೂ ಕೆಲವು ಹಾಡುಗಳನ್ನು ಬರೆದಿರುವಂತೆ ತಿಳಿದುಬರುತ್ತದೆ.'[2]

ದಿವಂಗತ ಗೋರೇಬಾಳ ಹನುಮಂತರಾಯರು ನರಹರಿತೀರ್ಥರ ಕೃತಿಗಳಾಗಿ 'ಇಂತುಮರುಳಾದೆನು ನಾ ಇಂತು ಮರುಳಾದೆ' 'ತಿಳಕೋ ನಿನ್ನೊಳಗೆ ನೀನೇ ಮರುಳೇ ತಿಳಕೋ ನಿನ್ನೊಳಗೆ ನೀನೇ' 'ಎಮ್ಮಾರೋ ಗುರುವೇ ನಮ್ಮಾರೋ' ಎಂಬ ಮೂರು ಕೀರ್ತನೆಗಳನ್ನು ಪ್ರಕಟಿಸಿದ್ದಾರೆ ಇವರ ಅಂಕಿತ 'ರಘುಪತಿ'.'ನರಹರಿ' ಅಂಕಿತದಲ್ಲಿ "ಹರಿಯೇ ಇದು ಸರಿಯೇ, ಚರಣಸೇವಕನಲಿ ಕರುಣಬಾರದ್ಯಾಕೆ" ಎಂಬುದನ್ನು ರಚಿಸಿರುವುದಾಗಿ ಹೇಳಿ ಅದನ್ನೂ ಸೇರಿಸಿದ್ದಾರೆ ಶ್ರೀಯುತರು "ದಕ್ಷಿಣ ದೇಶದ ಒಬ್ಬ ಬ್ರಾಹ್ಮಣರಲ್ಲಿ ನರಹರಿತೀರ್ಥರಿಂದ ವಿರಚಿತವಾದ ೧೭ ಪದಗಳಿದ್ದುವೆಂದು [3] ತಿಳಿಸುತ್ತಾರೆ

ನರಹರಿತೀರ್ಥರು 'ಕೂಚಿಪ್ಪುಡಿ' ನೃತ್ಯ ಸಂಪ್ರದಾಯಕ್ಕೆ ಪೋಷಕ ಪ್ರೇರಕ ಪ್ರವರ್ತಕ ವ್ಯಕ್ತಿಯಾಗಿದ್ದವರು. ಅವರ ಶಿಷ್ಯ ಸಿದ್ಧೇಂದ್ರಯತಿಯ 'ಭಾಮಾಕಲಾಪಂ' ಅತ್ಯಂತ ಪ್ರಸಿದ್ಧ ಕೃತಿ. 'ಭಾಸುದೇವಾಶ್ರಿತ.' 'ಮುದುಸಲಿ ನಚಿವ್ವಡು ನರಹರಿ ಮುನೀಶ್ವರಡು' ಮುಂತಾದ ಕ್ರಿ ಶ ೧೨೭೦ರ ಶಾಸನಗಳು ನರಹರಿತೀರ್ಥರ ಅಖಂಡ ಸಮಾಜ ಸೇವಾ ಸಾಧನೆಗಳನ್ನು ನಿರೂಪಿಸುತ್ತಿವೆ ಶ್ರೀ ಮದಾನಂದತೀರ್ಥ ಪೂಜ್ಯಪಾದಾಚಾರ್ಯ ಶಿಷ್ಯಸ್ಯ ಶ್ರೀ ನರಹರಿತೀರ್ಥ ಶ್ರೀ ಪಾದಯೋ' ಎಂಬ ಸಿಂಹಾಸನದ ಶಾಸನಗಳು ಮಧ್ವಾಚಾರ್ಯರ ಕಾಲದ ಬಗೆಗೂ ಬೆಳಕು ಚೆಲ್ಲುತ್ತವೆ ಈ ಸಾಂಸ್ಕೃತಿಕ ಹಿನ್ನೆಲೆಗಳನ್ನು ನೋಡಿದಾಗ ನರಹರಿತೀರ್ಥರು ಕನ್ನಡದಲ್ಲಿ ಕೃತಿಗಳನ್ನು ಮಾಡಿರುವ ಸಾಧ್ಯತೆಗಳೇ ಹೆಚ್ಚಾಗಿದೆ ಹರಿಯೇ, ಇದು ಸರಿಯೇ' ಎಂಬ

---

1 "ಅವಲೋಕನ'—ಸಿದ್ಧಯ್ಯ ಪುರಾಣಿಕ—ಪು 231

2 ಕರ್ನಾಟಕ ಕವಿಚರಿತ್ರೆ'—ರಾ॥ ನರಸಿಂಹಾಚಾರ್

3 'ಹರಿದಾಸರ ಪದಸುಳಾದಿಗಳು'—ಗೋರೇಬಾಳ ಹನುಮಂತರಾವ್–ಪು 18

ಶ್ರೀ ರಾಗದ ಕೀರ್ತನೆಯೊಂದು ಎಂತು ಮರುಳಾದೆ, ನಾನೆಂತು ಮರುಳಾದೆ' ಎಂಬ ಆನಂದ ಭೈರವಿ ರಾಗದ ಕೀರ್ತನೆಯೊಂದು ಇವರ ಕೀರ್ತನೆಗಳಲ್ಲಿ ಇಂದಿಗೂ ಜನಪ್ರಿಯವಾಗುಳಿದಿವೆ [1]

## ಜಯತೀರ್ಥರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆಯೇ ?

ಜಯತೀರ್ಥರು 'ವಂಶವಿಠಲ'ನನ್ನು ಪೂಜಿಸುತ್ತಿದ್ದವರು ಶಾಸ್ತ್ರ ಪ್ರಪಂಚದ ಸೀಮಾ ಪುರುಷರಾಗಿದ್ದವರು ದ್ವೈತಸಿದ್ಧಾಂತದ ಉತ್ತುಂಗಶೃಂಗ ಸರ್ವಜ್ಞಕಲ್ಪರು ಇವರ 'ಶ್ರೀ ಮನ್ನ್ಯಾಯ ಸುಧಾ ಗ್ರಂಥ ದ್ವೈತಸಿದ್ಧಾಂತದ ಆಧಾರಸ್ತಂಭ ಇವರು ಕನ್ನಡದಲ್ಲೂ ಕೃತಿಗಳನ್ನು ಬರೆದಿದ್ದಾರೆಯೇ ? ಬರೆದಿರಬಹುದು ಎನ್ನುವುದಕ್ಕ ಸೂಚನೆಯೇನೂ ದೊರಕಿದ ವಿದ್ವಾಂಸರೂ, ಸಂಸ್ಕೃತ ಪ್ರಾಧ್ಯಾಪಕರೂ ಆಗಿರುವ ಶ್ರೀ ಪ್ರಭಂಜನ ಅವರು ತಮ್ಮ ಪ್ರಾಸನ ಕೆರೆ ಹಸ್ತಪ್ರತಿ ಗ್ರಂಥಾಲಯದ 'ಅತ್ಯಂತ ಹಳೆಯ ಓಲೆಗರಿಗಳಲ್ಲಿ, ಹೊತ್ತಗೆ 'ಗಳಲ್ಲಿ ಇತಿ ಟೀಕಾಕೃತ್ಪಾದಕೃತಂ' ಎಂದು ಇರುವ 'ಸೀಲಮೇಘಶ್ಯಾಮ' ಎಂಬ ಕನ್ನಡದ ಕೃತಿ ದೊರಕಿದೆ ಈ ಕೃತಿಯ ಕಡೆಯ ಸಾಲಿನಲ್ಲಿ 'ಗುರುರಾಮ ವಿಠಲ' ಎಂಬ ಅಂಕಿತವಿದೆ, ಎಂದು ಹೇಳಿ ಈಗಾಗಲೇ ತಮ್ಮ ಕೆಲವು ಪ್ರಕಟಿತ ಕೃತಿಗಳಲ್ಲಿ ಇದರ ಉಲ್ಲೇಖ ಮಾಡಿದ್ದಾರೆ ಆದರೆ ಈ ದಿಕ್ಕಿನಲ್ಲಿ ಇನ್ನಷ್ಟು ಸಂಶೋಧನೆಯಾಗಬೇಕಾದ ಅಗತ್ಯವಿದೆ ಈ ಅಂಕಿತದ. ಆ ಕಾಲದ ಇನ್ನೂ ಕೆಲವು ಕೃತಿಗಳು ದೊರೆತಲ್ಲಿ ದಾಸಸಾಹಿತ್ಯದ ಪ್ರಾರಂಭಿಕ ಸೃಷ್ಟಿಗೆ ಹೊಸದೃಷ್ಟಿ ಬರುತ್ತದ

## ಶ್ರೀಪಾದರಾಜರು ಪರಂಪರೆಯ ಪ್ರವರ್ತಕರು

ಶ್ರೀಪಾದರಾಜರು ಜನರ ಆಡುಭಾಷೆಯಾದ ಕನ್ನಡದಲ್ಲೇ ಕಾವ್ಯ ರಚಿಸಲು, ಭಕ್ತಿಯನ್ನು ಪ್ರೇರೇಪಿಸಲು, ಆ ಮೂಲಕ ಸುಸಂಸ್ಕೃತ ಜನಾಂಗ

---

1 ಪುರಂದರ ಸಾಹಿತ್ಯ ದರ್ಶನ, ಸಂ ಡಾ॥ ಎಸ್ ಕೆ ರಾಮಚಂದ್ರರಾವ್ ಪು 34

ವೊಂದನ್ನು ನಿರ್ಮಾಣ ಮಾಡಲು ನಿರ್ಧರಿಸಿ ಶ್ರೀರಂಗದಿಂದ ಮುಳುಬಾಗಿಲಿನ ವರೆಗೆ ಭಕ್ತಿರಸದ ಓತಪ್ರೋತ ಪ್ರವಾಹವನ್ನೇ ಹರಿಸಿ, ಕನ್ನಡದಲ್ಲಿ ಭಕ್ತಿಯುಗದ ಪ್ರವರ್ತಕರೆನಿಸಿದರು.

ಮುಳಬಾಗಿಲು ಶ್ರೀಪಾದರಾಜರ ಕಾರ್ಯಕ್ಷೇತ್ರವಾದರೆ ಶ್ರೀರಂಗ ಅವರಿಗೆ ಪ್ರೇರಣೆ ನೀಡಿದ ಸ್ಥಳವಾಗಿತ್ತು. ಕಾವೇರಿರಂಗನನ್ನು ನೋಡದ ಕಣ್ಣುಗಳು ಇದ್ದರೂ ಒಂದೇ, ಇರದಿದ್ದರೂ ಒಂದೇ ಎನ್ನುವಷ್ಟು ಭಕ್ತಿವಿಶ್ವಾಸ ಗಳನ್ನು ಅವರು ಶ್ರೀರಂಗದ ರಂಗನಾಥನಲ್ಲಿ ಇರಿಸಿದ್ದವರು.[1] ಶ್ರೀರಂಗದಲ್ಲಿಯೇ ಶ್ರೀಪಾದರಾಜರ ಸಾಕ್ಷಾತ್ ಗುರುಗಳಾದ ಸ್ವರ್ಣವರ್ಣತೀರ್ಥರು ನೆಲಸಿದ್ದು, ಪದ್ಮನಾಭತೀರ್ಥರ ಮಠದ ಪೀಠದಲ್ಲಿ ಬೆಳಗಿಸುವವರಾಗಿ ಉತ್ತಮ ಪೀಠಾಧಿಪತಿಗಳೆಂದು ಕೀರ್ತಿ ಪಡೆದಿದ್ದರು. ಬ್ರಹ್ಮಚರ್ಯದ ಪ್ರಬಲ ತೇಜಸ್ಸಿನಿಂದ ಅವರ ಇಡೀ ದೇಹ ಹೊಂಬಣ್ಣದಿಂದ ಪ್ರತಿಫಲಿಸುತ್ತಿದ್ದುದರಿಂದ ಅವರಿಗೆ ಸ್ವರ್ಣವರ್ಣತೀರ್ಥರೆಂದೇ ಅನ್ವರ್ಥನಾಮವಿತ್ತು. ಶ್ರೀರಂಗದ ಜೀಯರ್ ಗಳಿಗೆ ಅತ್ಯಂತ ಆತ್ಮೀಯರಾಗಿದ್ದ ಅವರು ಅಲ್ಲಿಯ ಸುಪ್ರಸಿದ್ಧ ವಿದ್ವಾಂಸ ರಾಗಿದ್ದ ಪಿಳ್ಳೈ ಲೋಕಾಚಾರ್ಯರ ಮಗ ತಿರುಮಲೈ ಆಳ್ವಾರ್ ಅವರಿಗೂ ಪರಮ ವಿಶ್ವಾಸಿಗಳಾಗಿದ್ದರು. ಆಗ ದ್ರಾವಿಡ ಪ್ರಬಂಧಗಳು ತಮಿಳುನಾಡಿನ ಜನಸಾಮಾನ್ಯರ ಹೃದಯಕ್ಕೆ ನೇರ ಮುಟ್ಟಿ ವ್ಯಾಪಕವಾಗಿ ಭಕ್ತಿಪಂಥ ಉಚ್ಛ್ರಾಯವಾಗುತ್ತಿದ್ದ ಕಾಲ. ಭಕ್ತಿಯನ್ನು ಉದ್ದೀಪಿಸುವ, ಜನರ ಬದುಕನ್ನು ಸನ್ಮಾರ್ಗದಲ್ಲಿ ಅರಳಿಸುವ ಸಾಧನವಾಗಿ ಸಾಹಿತ್ಯ ಕೆಲಸ ಮಾಡು ತ್ತಿದ್ದುದನ್ನು ಶ್ರೀಪಾದರಾಜರು ತುಂಬು ಸಂಭ್ರಮದಿಂದ ಕಂಡು ಪ್ರೋತ್ಸಾಹಿ ಸಿದರು.

ಮುಂಚೆ ತಮಿಳು ಪ್ರಬಂಧಗಳನ್ನು ಸಾಹಿತ್ಯಬದ್ಧವಾದ, ಗಂಭೀರ ಪ್ರವಚನ, ವೈದಿಕ ಪಾಠಕ್ರಮದಲ್ಲಿ ಗರ್ಭಗುಡಿಯೊಳಗೆ ದೇವರ ಮುಂದೆ ಹೇಳಲಾಗುತ್ತಿತ್ತು. ಇದು ಇಯಲ್ ಸೇವೆ ಎಂದೇ ಪ್ರಖ್ಯಾತವಾಗಿತ್ತು.

---

1 ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ — ಶ್ರೀಪಾದರಾಜರ ಕೃತಿಗಳು, ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಣೆ, ಪು. 31

ಆದರೆ ಶ್ರೀಪಾದರಾಜರ ಕಾಲದಲ್ಲೇ ಶ್ರೀರಂಗದಲ್ಲಿ ಉತ್ಸವಮೂರ್ತಿಯು ಮೆರವಣಿಗೆಯಲ್ಲಿ ತಮಿಳು ಪ್ರಬಂಧಗಳನ್ನು ರಾಗತಾಳಗಳಲ್ಲಿ ಸಂಗೀತವಾದ್ಯಗಳೊಡನೆ ಹಾಡುತ್ತಾ ಕುಣಿಯುತ್ತಾ, ಸೇವೆಸಲ್ಲಿಸುವ 'ಇಶೈ' ಕಾರ್ಯಕ್ರಮ ಪ್ರಾರಂಭವಾಯಿತು "ಶ್ರೀಪಾದರಾಜರ ಲಕ್ಷ್ಮೀಪ್ರಬಂಧ ಪ್ರಾದುರ್ಭಾವ ಮಂಪಕ ವಸ್ತುವ ರಚನೆ ಪಾಠ ಪ್ರಧಾನವಾದ 'ಇಯಲ್' ಪ್ರಕಾರಕ್ಕೆ ಹೊಂದಿಕೊಳ್ಳುವುದನ್ನು ಗಮನಿಸಬೇಕು ಅವರ ಉಳಿದ ಪದಗಳು, ಸುಳಾದಿಗಳು ಗೇಯ ರೂಪವಾದ 'ಇಶೈ' ಪ್ರಕಾರಕ್ಕೆ ಸೇರುವುವು[1] ರಂಗವಿಠಲ ಎಂಬ ಅಂಕಿತದ ಶ್ರೀಪಾದರಾಜರ ನಾದಪ್ರಧಾನಭಕ್ತಿಯನ್ನೂ, ಶ್ರೀರಂಗದ ರಂಗನಾದನಲ್ಲಿ ಅವರಿಗಿದ್ದ ದೀಕ್ಷೆಯನ್ನೂ ಶ್ರೀರಂಗ ಅವರ ಮೇಲೆ ಬೀರಿದ್ದ ಪ್ರಭಾವವನ್ನೂ ಸ್ಪಷ್ಟವಾಗಿ ಸೂಚಿಸುತ್ತದೆ[2]

ಶ್ರೀಪಾದರಾಜರು ಚಂದ್ರಗಿರಿಯಲ್ಲಿ ಸಾಳ್ವನರಸಿಂಹನ ರಾಜಗುರುಗಳಾದಾಗ ತಿರುಪತಿಬೆಟ್ಟದ ಮೇಲಿರುತ್ತಿದ್ದ ವಿಖ್ಯಾತ ಸಂಕೀರ್ತನಕಾರರಾದ ತಾಳ್ಳಪಾಕಂ ಅಣ್ಣಮಾಚಾರ್ಯರನ್ನು ಆಗಾಗ್ಗ ಭೇಟಿಯಾಗುತ್ತಿದ್ದರು 'ಶ್ರೀಪಾದರಾಜರ ರಚನೆಗಳಿಂದ ಅಣ್ಣಮಾಚಾರ್ಯರು ಸ್ಫೂರ್ತಿಪಡೆದರೆಂಬ ಉಲ್ಲೇಖ ತೆಲುಗು ಸಾಹಿತ್ಯ ಚರಿತ್ರೆಯಲ್ಲೇ ಬರುತ್ತದೆ'[3] "ಅಣ್ಣಮಾಚಾರ್ಯರು ಶ್ರೀಪಾದರಾಜರನ್ನು ಅನುಕರಿಸಿದ ಸೂಚನೆಗಳಿವೆ ಶ್ರೀಪಾದರಾಜರು ಅಣ್ಣಮಾಚಾರ್ಯರಿಗಿಂತ ವಯಸ್ಸಿನಲ್ಲಿ ಸ್ವಲ್ಪ ದೊಡ್ಡವರಾದವರು[4]

ಯುಗಯುಗಗಳಿಂದ ಗಾಢಗೂಢವಾಗಿದ್ದ ಸಂಸ್ಕೃತದ ಮಹಾಮಂತ್ರಗಳನ್ನು, ಕಾವ್ಯಗಳನ್ನು, ವೇದೋಪನಿಷತ್ತುಗಳನ್ನು ಸಾಮಾನ್ಯ ಜನರಿಗೂ

---

1 ಪುರಂದರ ಸಾಹಿತ್ಯ ದರ್ಶನ—ಸಂಪುಟ—4—ಸಂ, ಪ್ರೊ॥ ಎಸ್ ಕೆ ರಾಮಚಂದ್ರರಾವ್ ಪು 5

2 ಕಂಗಳಿದ್ಯಾತಕೋ ಕಾವೇರಿರಂಗನ ನೋಡದ —ಶ್ರೀಪಾದರಾಜರ ಕೃತಿಗಳು, (ಪ್ರೈ ಪಿ ಪು 31)

3 ಪುರಂದರ ಸಾಹಿತ್ಯ ದರ್ಶನ—ಸಂಪುಟ—4—ಸಂ - ಪ್ರೊ॥ ಎಸ್ ಕೆ ರಾಮಚಂದ್ರರಾವ್ (ಪು 6)

4 ಗಾನಕಲೆ—ರಾಳ್ಳಪಲ್ಲಿ ಅನಂತಕೃಷ್ಣಶರ್ಮ—ಪು 169

ಅರ್ಥವಾಗುವ ತಿಳಿಗನ್ನಡದಲ್ಲಿ ಶ್ರೀಪಾದರಾಜರು ಹೇಳಿದರು "ಒಂದುಒಂದು ನಾನಾಭವದಲಿ ಬೆಂದೆನಯ್ಯಾ ನಂದನಂದನ ಇಂದಿರಾನಂದ ಕುಂದದ ಪದ್ಮದಳದಂತ ಮಂದಹಾಸ ತೋರಿ ನಂದನಕಂದ ಇಂದೆನ್ನ ನಲಹಯ್ಯ ರಂಗವಿಠಲ" ಎಂದು ಭಗವಂತನನ್ನು ಪರಿಪರಿಯಿಂದ ಪ್ರಾರ್ಥಿಸಿದರು. ಐದು ಶತಮಾನಗಳ ಹಿಂದೆಯೇ, ವೈದಿಕವಿದ್ವನ್ಮಣಿಗಳು ಕನ್ನಡವೆಂದರೆ ಮೈಲಿಗೆ ಎಂದು ಮೂಗುಮುರಿಯುತ್ತಿದ್ದ ಕಾಲದಲ್ಲಿ. ಪೀಠಾಧಿಪತಿಗಳಾದವರು ಸಂಸ್ಕೃತ ಬಿಟ್ಟು ಬೇರೆ ಭಾಷೆಯನ್ನು ಉಪಯೋಗಿಸುವುದು ಊಹಿಸಲೂ ಸಾಧ್ಯವಿಲ್ಲದಿದ್ದ ಪರಿಸ್ಥಿತಿಯಲ್ಲಿ, ಶ್ರೀಪಾದರಾಜರು ಕನ್ನಡಕ್ಕೆ ಅಗ್ರಪಟ್ಟ ಕಟ್ಟಿ, ಸಿದ್ಧಾಂತವನ್ನು, ಸಾಹಿತ್ಯವನ್ನು, ಬದುಕಿನ ಮೌಲ್ಯವನ್ನೂ ಕನ್ನಡದಲ್ಲೇ ಪ್ರಕಟಿಸಿದರು. ತಮ್ಮ ಗಂಡುಧೈರ್ಯದಿಂದ ಕನ್ನಡತನದ ಮಹತ್ವವನ್ನು ನಾಡು ನಾಡೇ ಪುಳಕಿ ರೋಮಾಂಚನಗೊಳ್ಳುವಂತೆ ಪದಪದ್ಯಸುಳಾದಿ ಉಗಾಭೋಗಗಳ ಮೂಲಕ ಸಾರಿ ಹರಿದಾಸ ಸಾಹಿತ್ಯದ ಹರಿಕಾರರಾದರು. ಗೋಪಿಗೀತ, ಭ್ರಮರಗೀತ, ವೇಣುಗೀತಗಳನ್ನು ಕನ್ನಡದ ಹೃದ್ಯಪದ್ಯಗಳಾಗಿ ರಚಿಸಿ ಭಾಗವತದಶಮಸ್ಕಂಧದ ರಸಘಟ್ಟಿಯನ್ನು ಕನ್ನಡಕ್ಕಿಳಿಸಿ, ದಾಸ ಸಾಹಿತ್ಯವನ್ನು ರಸಘಟ್ಟಿ ಮಾಡಿದರು. ಅವರ ಮಧ್ವನಾಮ, ಪದಪುಂಜಗಳು ಚಿಮ್ಮುವ ಅವತಾರತ್ರಯ ನಿರೂಪಣೆಯು ಶಬ್ದ ಕುಂಜ. ಕನ್ನಡ ಕಾವ್ಯ ಪ್ರಪಂಚದಲ್ಲಿ ತಮ್ಮ ಕೀರ್ತನ ಕೌಶಲ್ಯದಿಂದ ಹೊಸ ಹೊಸ ಪ್ರಯೋಗ ಮಾಡಿ ಕನ್ನಡ ಸಾಹಿತ್ಯದ ಬಾನಿನಲ್ಲಿ ದಾಸ ಸಾಹಿತ್ಯದ ಕಾಮನ ಬಿಲ್ಲನ್ನು ಮೂಡಿಸಿದ ವಿಭೂತಿ ಪುರುಷರು ಶ್ರೀಪಾದರಾಜರು.

ಶ್ರೀಪಾದರಾಜರು ಸಂಭ್ರಮ ಸಡಗರಗಳ ಸಮಾರಂಭಗಳಲ್ಲಿ, ಪೂಜೆ ಉತ್ಸವಗಳ ವೈಭವ ವಿಜೃಂಭಣೆಗಳಲ್ಲಿ ಕನ್ನಡದಲ್ಲಿ ಕೀರ್ತನೆಯನ್ನು ಹಾಡುವ ನರ್ತನ ಮಾಡುವ ಗಾಯಕರ. ಭಾಗವತೋತ್ತಮರ ತಂಡವೊಂದನ್ನೇ ಸಂಘಟಿಸಿ ಹರಿದಾಸ ಸಂಸ್ಕೃತಿಯ ನಿರ್ಮಾಣ ಮಾಡಿದರು. ಪ್ರತಿದಿನ ಗೋಪೀನಾಥ ದೇವರ ಪೂಜಾ ಕಾಲದಲ್ಲಿ ಪರಂಪರಾಗತ ಮಂತ್ರಸ್ತೋತ್ರಗಳೊಡನೆಯೇ ಕನ್ನಡ ದೇವರ ನಾಮಗಳನ್ನು, ಭಜನೆಗಳನ್ನು ಹಾಡುವ, ನೃತ್ಯ ಮಾಡುವ ಹೊಸ ಸಂಪ್ರದಾಯವನ್ನು ಉದ್ಘಾಟಿಸಿದರು.

ವಿಬುಧ ಪ್ರಪಂಚದಲ್ಲಿ ಇಂದ್ರರಂತಿದ್ದ ವಿಬುಧೇಂದ್ರರ ಶಿಷ್ಯರಾಗಿದ್ದ ಶ್ರೀಪಾದರಾಜರು, ತಮ್ಮ ಚಿಕ್ಕವಯಸ್ಸಿನಲ್ಲೇ, ಪಂಡಿತಪ್ರಕಾಂಡರೆನಿಸಿಕೊಂಡ ಶ್ರೀ ರಘುನಾಥ ತೀರ್ಥರಿಂದಲೇ "ನಾವೆಲ್ಲ ಒರಿಯ ಶ್ರೀ ಪಾದಂಗಳೆನಿಸಿದರೆ ನೀವು ಶ್ರೀಪಾದರಾಜರು' ಎಂಬ ಮುಕ್ತಕಂಠದ ಪ್ರಶಸ್ತಿಗೆ ಪಾತ್ರರಾದವರು, 'ಮಧ್ವಮತದಲಿ ಪುಟ್ಟಿ, ಮರುಳ ವಾದವ ಕುಟ್ಟಿ ಗದ್ದುಗೆ ಮೆರೆದರು ದಿಟ್ಟ ಗುರುರಾಯ ಜಟ್ಟಿ" ಎಂದು ವಾದಿರಾಜರಿಂದ ವಂದಿತರಾದವರು[1]

ಸೂಕ್ಷ್ಮ ಭಾವನೆಗಳನ್ನು ಸಂವೇದನೆಗಳನ್ನು ಅಭಿವ್ಯಕ್ತಿಸಲು ಸಂಗೀತವೇ ಸಮರ್ಥ ಮಾಧ್ಯಮ ಎಂಬ ಸಂಗತಿಯನ್ನು ಅರಿತಿದ್ದ ಶ್ರೀಪಾದರಾಜರು ಪಲ್ಲವಿ ಅನುಪಲ್ಲವಿಗಳನ್ನು ಚರಣ ಪ್ರಬಂಧದ ಕೀರ್ತನೆಗಳನ್ನು ಮೊಟ್ಟ ಮೊದಲ ಬಾರಿಗೆ ಕನ್ನಡದಲ್ಲಿ ರಚಿಸಿ ಪ್ರಚಲಿತಗೊಳಿಸಿದರು ಸ್ವರಗಳು ಶ್ರುತಿಶುದ್ಧವಾಗಿದ್ದು, ಅದು ಕಿವಿಗೆ ಹಿತವಾಗಿದ್ದು, ಲಯದ ಸಾಮರಸ್ಯದಿಂದ ಕೂಡಿ ಬಂದಿರುವ ಮೊಟ್ಟ ಮೊದಲ ಕನ್ನಡ ಸಾಹಿತ್ಯ ಸಂಗೀತ ಕೃತಿ ಶ್ರೀಪಾದರಾಜರದೇ ಆಗಿದೆ ಸಂಗೀತ ಕಲೆಯ ಪ್ರಾಣ ಸ್ವರೂಪವಾಗಿದ್ದು, ಸಂಗೀತದ ಸಪ್ತ ಜ್ಯೋತಿಗಳೆನಿಸಿದ ಶ್ರುತಿಶುದ್ಧತೆ, ರಸಪ್ರಧಾನತೆ, ಲಯಶುದ್ಧತೆ ಸಂಪ್ರದಾಯ, ಗಮಕಾಲಂಕಾರ ಶೋಭೆ ಸಾಹಿತ್ಯಶುದ್ಧತೆ ಹಾಗೂ ಆನಂದಪೂರ್ಣತೆಗಳನ್ನು ಅನುಪಮವಾಗಿ ತಮ್ಮ ಕೀರ್ತನೆಗಳಲ್ಲಿ ಮೂಡಿಸಿ, ಕನ್ನಡ ಸಂಗೀತ ಸಾಹಿತ್ಯದ ಎತ್ತರ ಬಿತ್ತರಗಳನ್ನು ಅವರು ವ್ಯಾಪಕವಾಗಿ ಹೆಚ್ಚಿಸಿದರು

ಸಂಗೀತದ ಹಿನ್ನೆಲೆಯಲ್ಲಿ ಸುಳಾದಿ ಎನ್ನುವ ಹೊಸ ಪ್ರಕಾರದ ಆದ್ಯ ಪ್ರವರ್ತಕರು ಶ್ರೀಪಾದರಾಜರು ಸಪ್ತ ತಾಳಗಳಲ್ಲಿ ಕಾಲ ವಿಭಾಗಕ್ಕನುಸಾರವಾಗಿ ಲಯಬದ್ಧವಾಗಿ ಹಾಡುತ್ತಾ ಸಾಗುವ ಸುಳಾದಿ' ಮುಂದೆ ವಿಜಯದಾಸರಂತಹ ಶ್ರೇಷ್ಠ ಹರಿದಾಸರಿಗೂ ದಿವ್ಯರಾಜಮಾರ್ಗವಾಯಿತು ಶ್ರೀಪಾದರಾಜರ ಕೀರ್ತನೆಗಳು ಮುನಿಮಧ್ವಹೃದಯವನ್ನು ತೆರೆದಿಟ್ಟ ಕಲಾಕೃತಿಗಳು ಜಯಜಯ ಜಗತ್ರಾಣ ಜಗದೊಳಗೆ ಸುತ್ರಾಣ ಅಖಿಲ ಗುಣ ಸದ್ಧಾಮ

---

1 ಹಯವದನ ಅಂಕಿತರಾದ ವಾದಿರಾಜರ ಶ್ರೀಪಾದರಾಯರ ದಿವ್ಯ ಶ್ರೀ ಪಾದಭಜಿಸುವೆ' ಕೀರ್ತನೆ.

ಪದ್ಮನಾಭ' ಎನ್ನುವ ಅವರ ಕೃತಿಯಲ್ಲಿ ಪದ್ಮನಾಭನ ಪ್ರಚಂಡ ತೆರೆಗಳು ಸಜ್ಜನರ ಹೃದಯದ ದಡಗಳಿಗೆ ಬಡಿಯುವಂತೆ ರಚಿತವಾಗಿದೆ. ನಾಲಗೆಗೆ ನಾರಾಯಣ ನಾಮವೇ ಭೂಷಣ. ಕಾಲಿಗೆ ಹರಿಯಾತ್ರೆ, ಮನೆಗೆ ತುಲಸೀ ಬೃಂದಾವನ, ಕಿವಿಗೆ ಹರಿಕಥೆ, ಯೋಗಿಗಳಿಗೆ ಜ್ಞಾನ, ಸತಿಗೆ ಗೌರವ, ಕಣ್ಣುಗಳಿಗೆ ಸದಾ ರಂಗನನ್ನು ನೋಡುವುದೇ ಭೂಷಣ. ಶಿರಕ್ಕೆ ಭಗವಂತನಿಗೆ ಬಾಗಿ ನಮಿಸುವುದೇ ಭೂಷಣ. ಕೊರಳಿಗೆ ತುಳಸೀಮಾಲೆಯೇ ಭೂಷಣ, ರಂಗವಿಠಲ ನಿನ್ನ ನಾಮ ಅತಿ ಭೂಷಣ' ಎನ್ನುವ ಶ್ರೀವಾದಿರಾಜರು ಮಾನವರಿಗೆ ಮಾನವ ಭೂಷಣ ಎಂಬ ಲೋಕ ನೀತಿಯನ್ನು ಹೇಳಿ ಸಾರ್ವತ್ರಿಕ ಎಚ್ಚರಿಕೆ ಕೊಟ್ಟಿದ್ದಾರೆ. ಬಡತನದ ಕಷ್ಟಕಷ್ಟಗಳಲ್ಲಿರುವ ಆರ್ತರನ್ನು, ದೀನರನ್ನು ಅನಾಥರನ್ನು ಕಂಡೊಡನೆಯೇ ಕರುಣೆ ಉಕ್ಕೇರುವ ಶ್ರೀವಾದಿರಾಜರು "ಯಾಕೆ ಸೃಷ್ಟಿಸಿದ ನೀ ನಾಕಾರಣದೆ ಜಗದೇಕ ಕಾರಣ ಪುರುಷ ಶ್ರೀಕೃಷ್ಣ' ಎಂದು ಪ್ರಶ್ನಿಸುತ್ತಾರೆ "ಬಡಲಿಗನ್ನವ ಕಾಣೆ. ಉಡಲು ಅರಿವೆಯ ಕಾಣೆ ಗಡಗಡನೆ ನಡುಗುತಿಹೆನೋ ಕೃಷ್ಣ, ಕುಡುತೆ ಕೊಡುವವರಿಲ್ಲ. ನುಡಿಯ ಕೇಳುವರಿಲ್ಲ, ಬಡತನವು ಕಂಗಡಿಸಿತೋ ಕೃಷ್ಣ' ಎಂಬ ಅವರ ಕೀರ್ತನೆ ಬಡ ಜನಮಾನಸಗಳ ಎಲ್ಲ ದಲಿತ ವರ್ಗದವರ ಪಾಪಭೀತಿಯಿಂದ ನೊಂದವರ ಅನಂತ ದುಃಖಗಳ ಹಾಡು "ಪಾಲೊಳಗದ್ದು ನೀರೊಳಗದ್ದು ಹರಿ ನಾ ನಿನ್ನ ನಂಬಿದೆನೋ" ಎನ್ನುವ ಅನನ್ಯ ಭಕ್ತಿಯ ಉನ್ನತ ಶಿಖರಗಳಲ್ಲಿ ಮನುಷ್ಯ ಸತತ ನಡೆದಾಡಬೇಕೆಂಬ ಚಿಂತನೆ ಅವರದು. "ಸತಿ ಅನುಕೂಲವಿರಬೇಕು ಸುತನಲ್ಲಿ ಗುಣಬೇಕು, ಮತ ಒಂದಾಗಿರಬೇಕು" ಎಂದು ಸತ್ಸಂಗದ ಅಗತ್ಯವನ್ನು ವಿಶ್ವ ಕುಟುಂಬ ನೆಮ್ಮದಿಗಳ ಅಗತ್ಯವನ್ನು ಮನ ಮುಟ್ಟುವಂತೆ ಅವರು ನಿರೂಪಿಸಿದ್ದಾರೆ "ಉಂಬಾದ ಕಾಲಕ್ಕೆ ನೆಂಟರು ಇಷ್ಟರು ಬಂದರಾಗಿ ಬಾಗಿಲ ಕಾಯ್ವರು, ಉಂಬಾದತನ ತಪ್ಪು ಬಡತನ ಬಂದರೆ ಬಂದಂತೆ ಗುಣ ಮಾಲಿಸುವರು" ಎಂದು ಹೇಳಿ ಅಜ್ಞಾನದ ಮಂಪರಿನಲ್ಲಿ ವೈಭವದ ಅಮಲಿನಲ್ಲಿ ಬೀಗುತ್ತಿರುವವರಿಗೆ ಎಚ್ಚರಿಕೆಯ ಮಾತನ್ನು ಹೇಳುತ್ತಾರೆ. ಮುಕ್ತಿಯನ್ನು ಬಯಸುವ ಸುಜನರಿಗೆ 'ಶಕ್ತಿಬೇಕು ಭಕ್ತಿಬೇಕು ವಿರಕ್ತಿಬೇಕು ಸರ್ವಶಕ್ತಿಬೇಕು ಮುಂದೆ ಮುಕ್ತಿಯ ಬಯಸುವವರಿಗೆ' ಎಂದು ಹೇಳಿ ಸಂಯಮ, ಸಹನ, ವೈರಾಗ್ಯಗಳ

ಹಿರಿಮೆ ಗರಿಮೆಗಳನ್ನು ಸಾರುತ್ತಾರೆ. ಇಡೀ ತಮ್ಮ ಬದುಕು ವ್ಯಕ್ತಿತ್ವಗಳನ್ನು ಜಗದಂತನ ಪಾದಾರವಿಂದದಲ್ಲಿ ಸರ್ವಸಮರ್ಪಣ ಮಾಡಿಕೊಂಡುಬಿಟ್ಟ ಶ್ರೀಪಾದರಾಜರು "ನರಕ ಒಪ್ಪಿಸಿದ ಮೇಲೆ ಸುಂಕವುಂಟೇದೇವ' ಎಂದು ಹೇಳಿ ಜಗದ್ವ್ಯಕ್ತನಿಗೆ ದುಃಖ ಭಯದ ನೋಂಕಿಲ್ಲ ಎನ್ನುವುದನ್ನು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ 'ಬರುವುದು ಬುದ್ಧಿಯು ಬಲವು ಕೀರ್ತಿಯು ನಿರುತದಿ ಧೈರ್ಯವು ನಿರ್ಭಯತ್ವವು ಆರೋಗ್ಯಾನಂದ ಅಜಾಡ್ಯ ವಾಕ್ಪಟುತ್ವವು ವರ ರಂಗವಿಠಲ ನೆನೆಯೆ" ಎಂದುಹೇಳಿ ವಿಠಲ ನಾಮಸ್ಮರಣೆ ಸರ್ವವ್ಯಾಧಿನಿವಾರಕವೆಂಬುದನ್ನು ನಿರೂಪಿಸುತ್ತಾರೆ

'ಪೋಪು ಹೋಗೋಣ ಬಾರೋ ರಂಗ ಪೋಪು ಹೋಗೋಣ ಬಾ" ಎನ್ನುವ ಅತ್ಯಂತ ಜನಪ್ರಿಯ ಕೃತಿ ಶ್ರೀಪಾದರಾಜರ ವಾತ್ಸಲ್ಯಕ್ಕೆ ಅಪೂರ್ವ ನಿದರ್ಶನ "ದೃಷ್ಟಿ ತಾಕೀತೊ, ಬೀದಿ ಮಕ್ಕಳ ಬ್ಯಾಡವೋ ದೃಷ್ಟಿಯ ನಾರಿಯರೆಲ್ಲಾ ಕಣ್ಣಿಟ್ಟು ಹೀರುವರೋ ನಿನ್ನ' ಎಂದು ಕಾತುರದಿಂದ ಮಗುವನ್ನೆತ್ತಿ ಕೊಳ್ಳುವ ಯಶೋದೆ, "ಇಕ್ಕೋ ನೋಡೆ ರಂಗನಾಥನ ಪುಟ್ಟ ಪಾದವ ಸಿಕ್ಕಿತೇ ಶ್ರೀ ಲಕ್ಷ್ಮೀರಮಣನ ದಿವ್ಯ ಪಾದವ' ಎನ್ನುವ ಗೋಪಿಯರು 'ಏಕೆ ದೂರು ವರ ರಂಗಯ್ಯನ ಏಕೆ ದೂರುವಿರೆ" ಎನ್ನುವ ತಾಯಿ. 'ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ ಇಲ್ಲದ ಸುದ್ದಿ ಪುಟ್ಟಿಸಿ ಕಳ್ಳನೆಂದು ದೂರುತಾರೆ ಗೋಪಿ ಎನ್ನ ಕೊಲ್ಲಬೇಕೆಂದು ಬಗೆದು ಎಂದು ಮುಗ್ಧನಾಗಿ ನಿಲ್ಲುವ ಮುದ್ದುಕೃಷ್ಣ, "ಬಾರೋ ನಮ್ಮ ಮನೆಗೆ, ಗೋಪಾಲಕೃಷ್ಣ ಬಾರೋ ನಮ್ಮ ಮನೆಗೆ' ಎಂದು ಕರೆಯುವ ಭಾಗವತರು, ಈ ಪಾತ್ರಗಳೆಲ್ಲಾ ಶ್ರೀಪಾದರಾಜರ ವಾತ್ಸಲ್ಯದ ನೆರಳಾಗಿ ಭಾಗವತದ ಕೆನೆಯಾಗಿ ಮೂಡಿ ಬಂದಿವೆ 'ರಂಗ ಕೊಳಲ ನೂದುತ ಬಂದ ಯಶೋದೆಯ ಕಂದ' ಎನ್ನುವ ವೇಣುಗೀತ ಕನ್ನಡದ ಅಪೂರ್ವ ಕಥನ ಕಲೆಯಾಗಿ, ರಮ್ಯ ಧ್ವನಿಯಾಗಿ ಮೂಡಿ ಬಂದಿದೆ ಶ್ರೀಪಾದರಾಜರ ವಿರಹದ ಚಿತ್ರಣ ಅನುಪಮ ಗೋಪಿಯೊಬ್ಬಳು ಕೃಷ್ಣನ ವಿರಹ ತಾಪದಿಂದ ಬೆಂದು 'ಒಲ್ಲೆನವ್ವಾ ಲಕುಮಿಯನಲ್ಲ ಬಾರದಿದ್ದರೆ ಈ ತನು ಹೊರೆಯನೊಲ್ಲೆನವ್ವಾ' ಎಂದು ಹೇಳುತ್ತಾ "ಹಾರ ಕೊರಳಿಗೆ ಭಾರ ಹೂವಿನ ಭಾರ ನೈರಿಸಲಾರೆನೇ, ಮಾರನಯ್ಯನು ಬಾರದಿದ್ದರೆ ಮಾರನಂಬಿಗೆ ಗುರಿಯ

ಮಾಡಿ' ಎಂದು ವಿಹ್ವಲಗೊಳ್ಳುವ ಚಿತ್ರ ಅವಳ ವಿರಹದ ತೀವ್ರತೆಗೆ ಬೆಳಕಾಗುತ್ತದೆ

ನನ್ನ ಹೃದಯದಲ್ಲಿ ವಾಸವಾಗಿ ಸುಮ್ಮನಿದ್ದರೇ ಸರಿ ಇಲ್ಲದಿದ್ದಲ್ಲಿ ನಿನ್ನ ಮರ್ಮ ಕರ್ಮಗಳನ್ನು ದೇಶ ದೇಶದಲ್ಲಿ ಪ್ರಕಟಿಸಬಲ್ಲೆ ಎಂದು ಶ್ರೀ ಕೃಷ್ಣನನ್ನು ಎಚ್ಚರಿಸಿ ತರಳತನದಲ್ಲಿ ದುರುಳನಾಗಿ ಬಂದು ಒರಳಿಗೆ ಕಟ್ಟಿಕೊಂಡವನು ಕರುವ ಕಾಯಲು ಪೋಗಿ ಗೊಲ್ಲರಕೂಡ ಸವಿ ಉಂಡವನು, ಸರಮಾನ ಹೊರ ಮನೆಗಳ ಪೊಕ್ಕು ಬೆಣ್ಣೆಯ ಅರಿಯದಂತೆ ಕದ್ದು ಮೆದ್ದವನು, ಕೆರಳಿಸಿದ ಮಾವನ ಒದರುವ ಎಲೋ ನರಹರಿ ಎನ್ನ ಬಾಯಿಗೆ ಬಂದುದನು' ಎಂದು ದೇವರನ್ನೇ ಗದರಿಕೊಳ್ಳುವ ಧೈರ್ಯ ತೋರುತ್ತಾರೆ 'ತುಂಗಗುಣನಿಲಯ ಅಂಗಜನ ಪಿತನೆಂದು ರಂಗನಿಗೆ ಮಾನಸೋತು ಮರುಳಾದೆವ್ಹೋ ಹಿಂಗಿ ಬದುಕುವುದೆಂತೋ ಭೃಂಗ ಮಧುರೆಗೆ ಪೋಗಿ ರಂಗರಾಯನ ತಂದು ಎಮ್ಮನಾಳುವುದೋ' ಎಂದು ಗೋಪಿಯರ ಮನೋವೇದನೆಯನ್ನು ಹೇಳುತ್ತಾ 'ಪತಿಸುತರ ಭವಬಂಧನಗಳೆಲ್ಲ ಈಡ್ಯಾಡಿ ಗತಿ ನಮಗೆ ಅವನೆಂದು ಮನಸೋತೆವೋ ಕೃತಕ ಪರಿಯದ ನಮ್ಮ ಮನದೊಳು ಸಿಲ್ಲಿಸಿ ಪೋದ ಪತಿಯೊಡನೆ ಸಂಧಾನವೆಂತೋ ಎಲೋ ಮಧುಪಾ' ಎಂದು ಅವರ ಅಲಂಕಾರ ಕ್ಷಿಯವಾದ ಉಪಮಾನವನ್ನು ಹೃದಯ ತುಂಬಿ ಹೇಳಿಕೊಂಡಿದ್ದಾರೆ

ಶ್ರೀಪಾದರಾಜರು ಸರ್ವಸಾರಭೋಕ್ತನಾದ ಶ್ರೀಹರಿಯ ಅನುಗ್ರಹ ವಿಶೇಷದಿಂದಾಗಿ ಸುಖಪ್ರಾರಬ್ಧ ಪಡೆದಿದ್ದು ಅದರಂತೆ ಕ್ಲೇಶಾನಂದಗಳನ್ನು ಈಶಾಧೀನಗೈದು ಅದರಂತೆ ಪ್ರವರ್ತಿಸುವ ದೃಢಭಕ್ತಿಯ ಧೀಮಂತ ಭಕ್ತಾಗ್ರಣಿಗಳು 'ಇಟ್ಟಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ ಎಂದು ಭಗವಂತನಿಗೆ ಹೇಳುತ್ತಾ ಭಗವಂತನ ಕರುಣೆಯಿದ್ದರೆ ಮೃಷ್ಟಾನ್ನ ಭೋಜನ, ಮೋಹದ ಪೀತಾಂಬರ, ಸೊಂಪಿ ಸಂಚನವಾಲು, ಚಂದ್ರಶಾಲೆಯ ಚಂದ್ರಮಂಚ, ವರಛತ್ರ ಚಾಮರಗಳು ಸಹಜವಾಗಿಯೇ ಲಭ್ಯವಾಗುತ್ತವೆ ಭಗವಂತನ ಕರುಣೆ ಒಮ್ಮೆ ತಪ್ಪಿತೆಂದರೆ 'ಅನ್ನ ಕಾಣದ ಬಾಯ್ಬಿಡಿಸುವ. ಕಡೆಗೆ ಕೌಪೀನವು ದೊರೆಯದೋ, ಛತ್ರದಲ್ಲಿ ಸಂದ ಮೋದ ತೋಳನ್ನೇ ತಲೆದಿಂಬಾಗಿಸಿ ಮಲಗಬೇಕೋ ಎಂಬ ಹರಿಕೃಪೆ ದೂರೆಯಾದರೆ ಆಗುವ ಕಡುಕಷ್ಟಗಳನ್ನು ಸನಸು

ತ್ತಾರೆ "ಗಂಗಾಜನಕ ಪಾಂಡುರಂಗ ನಿನ್ನಯ ಚಿತ್ತರ ಸಂಗವಿರಲಿ ದುಷ್ಟ ಸಂಗ ಬ್ಯಾಡ ಅಂಗನೆಯರ ಕೂಡಿ ಅನಂಗಬಾಣಕೆ ಸಿಲುಕಿ ಭಂಗವ ಪಡಲಾರೆ ಶ್ರೀರಂಗವಿಠಲ ಪರಿಯಾ" ಎಂದು ಅನನ್ಯರಾಗಿ ಪ್ರಾರ್ಥಿಸುತ್ತಾರೆ ಗೋಪಿಯರ ವಿರಹಗೀತ ಕನ್ನಡ ಕಾವ್ಯದ ಸುಂದರ ಸಾಲುಗಳಾಗಿ ಶ್ರೀಪಾದರಾಜರ ಕೃತಿಗಳಲ್ಲಿ ಒಡ ಮೂಡಿಬಂದಿವೆ "ಒಲ್ಲೆನಮ್ಮಾ ಲಕುಮಿಯನಲ್ಲ ಬಾರದಿದ್ದರ ಈ ತನು ಮೊರೆಯನೊಲ್ಲೆನಮ್ಮ ಹಾರ ಕೊರಳಿಗೆ ಭಾರ ಸೈರಿಸಲಾರೆನೆ ಮಾರನಯ್ಯನು ಬಾರದಿಹರ ಮಾರನಂಬಿಗೆ ಗುರಿಯ ಮಾಡಿ" ಎಂದು ಹೇಳಿ ತಮ್ಮ ವಿರಹತಾಪ ತೀವ್ರತೆಯನ್ನು ಪ್ರಕಟ ಮಾಡುತ್ತಾರೆ ಕಾವೇರಿ ರಂಗನನ್ನು ನೋಡದ ಜನ್ಮ ಇದ್ದರೇನು ಇಲ್ಲದಿದ್ದರೇನು ಎನ್ನುವ ಧಾಟಿಯಲ್ಲಿ ಶ್ರೀಪಾದರಾಜರು ಕಂಗಳಿದ್ದ್ಯಾತಕೋ ಕಾವೇರಿ ರಂಗನ ನೋಡದ ಎನ್ನುವ ಜನಪ್ರಿಯ ಕೀರ್ತನ ರಚಿಸಿದ್ದಾರೆ ಶ್ರೀರಂಗನ ಚಂದ್ರಪುಷ್ಕರಿಣಿಯಲ್ಲಿ ಸ್ನಾನ ಮಾಡಿ ವೈಕುಂಠದ ಹೆಬ್ಬಾಗಿಲು ದಾಟಿ ರಂಗನಾಥನನ್ನು ಕಾಣದವನೇ ನಿರ್ಭಾಗ್ಯ, ಕಂಡವನೇ ಧನ್ಯ ಎಂಬ ಅವರ ಈ ಭಾವ ಅನನ್ಯ "ಸುಖದುಃಖೇ ಸಮೇ ಕೃತ್ವಾ' ಹಾಗೂ ಸ್ಥಿತಪ್ರಜ್ಞನಿಗಿರಬೇಕಾದ ಅಗತ್ಯಗಳನ್ನು ಅವರ ನಿಜಸ್ವರೂಪದ ಅರ್ಥಗಳನ್ನು ಶ್ರೀಪಾದರಾಜರು "ಪಾಲೊಳಗದ್ದು ನೀರೊಳಗದ್ದು ಹರಿಯ ನಿನ್ನ ನಂಬಿದೆನೋ ಎಂದು ಹೇಳಿ ನನ್ನದೇನೊಂದಿಲ್ಲ, ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ ಎನ್ನುತ್ತಾ ಭಗವಂತನ ಸರ್ವೋತ್ತಮತ್ವವನ್ನು ಪ್ರಕಟಗೊಳಿಸಿದ್ದಾರೆ

ಶ್ರೀಪಾದರಾಜರು ಮಧ್ವನಾಮದ ಮೂಲಕ ಮಾಧ್ವಸಮಾಜಕ್ಕೆ ಪ್ರತಿ ದಿನವೂ ದ್ವೈತತತ್ವ ಪ್ರಣಾಳಿಕೆಯಾಗುಳಿಯುವಲ್ಲಿ ತತ್ವಚಿಂತಾಮಣಿಯನ್ನಿತ್ತು ಕೃತಕೃತ್ಯರಾಗಿದ್ದಾರೆ ಮಧ್ವಮತದ ಮುಖ್ಯ ತತ್ವವಾದ ಹರಿಸರ್ವೋತ್ತಮತ್ವವನ್ನು ಶ್ರೀಪಾದರಾಜರು ಪ್ರಬಲವಾಗಿ ತಮ್ಮ ಕೀರ್ತನೆಗಳಲ್ಲಿ ಪ್ರತಿಪಾದಿಸಿದ್ದಾರೆ "ಜಯ ಜಯ ಜಗತ್ರಾಣ ಜಗದೊಳಗ ಸುತ್ರಾಣ ಅಖಿಲಗುಣ ಸದ್ಧಾಮ ಮಧ್ವನಾಮ" ಎನ್ನುವಲ್ಲಿ ಜಗತ್ಪ್ರಾಣರೂ ಜಗತ್ತ್ರಾಣರೂ ಆದ ವಾಯುದೇವರ ವಿವಿಧ ಮಹಿಮೆಯ ಲೀಲಾ ವಿಲಾಸಗಳನ್ನು, ಮುಖ್ಯಪ್ರಾಣದೇವರ ಗುಣ ನಿಷತ್ತ್ರಿಪಾದ್ಯವಾದ ಮಹಾಮಹಿಮೆಯನ್ನು ಅನನ್ಯವಾಗಿ ಅಭಿವ್ಯಕ್ತಿಸಿದ್ದಾರೆ.

"ಕರಣಾಭಿಮಾನಿ ಸುರರು ದೇಹವ ಬಿಡಲು
ಕುರುಡಕಿವುಡ ಮೂಕನೆಂದೆನಿಸುವ ।
ಪರಮ ಮುಖ್ಯ ಪ್ರಾಣ ತೊಲಗಲು ದೇಹವನು
ಅರಿತು ಹೆಣನೆಂದು ಪೇಳ್ವರು ಬುಧಜನ ।
ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ
ಪರತರನೆನಿಸಿ ನಿಯಮಿಸಿ ನೆಲಸಿಹ ।
ಹರಿಯನಲ್ಲದೆ ಬಗೆಯ ಅನ್ಯರನು ಲೋಕದಲಿ
ಗುರುಕುಲತಿಲಕ ಮುಖ್ಯ ಪವಮಾನನು ಎಂದು ಹೇಳುತ್ತಾ

ತ್ರೇತಾಯುಗದಲ್ಲಿ ವಾಯುದೇವರು ಹನುಮಂತನಾಗಿಯೂ, ದ್ವಾಪರ ದಲ್ಲಿ ಭೀಮನಾಗಿಯೂ ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಅವತರಿಸಿದ ಅದ್ಭುತ ಕಥಾನಕದ ಭವ್ಯಪರದೆಯನ್ನು ಬಿಚ್ಚುತ್ತಾ ಹೋಗುತ್ತಾರೆ. ಮಾನನಿಧಿ ಮಧ್ವಾಚಾರ್ಯರು ಜಗತ್ತಿಗೆ ತಮ್ಮ ಜ್ಞಾನಸುಧೆಯನ್ನಿತ್ತು ಉದ್ಧರಿಸಿದ ಮಹಾನು ಭಾವರು ಎಂಬುದನ್ನು ಮನೋಜ್ಞವಾಗಿ ಈ ಮಧ್ವನಾಮದಲ್ಲಿ ನಿರೂಪಿಸಿರುವ ಶ್ರೀಪಾದರಾಜರು. ತಮ್ಮ ಸಂಪೂರ್ಣ ಗುರುಗೌರವಾದರ ಮನ್ನಣೆಗಳನಿತ್ತ ಜಗನ್ನಾಥದಾಸರು ಮಧ್ವನಾಮಕ್ಕೆ ಬರೆದಿರುವ ಫಲಶ್ರುತಿ ಶ್ರೀಪಾದರಾಜರಿಗೆ ದಾಸಕುಲದ ಪರವಾಗಿ ಅರ್ಪಿಸಿರುವ ದಿವ್ಯ ಕೊಡುಗೆ. ಶ್ರೀಪಾದರಾಜರ ಈ ಮಧ್ವನಾಮ ಓದಿದವರಿಗೆ ದೊರಕುವ ಫಲ ಹೀಗಿದೆ

ಸೋಮ ಸೂರ್ಯೋಪರಾಗದಿ ಗೋಸಹಸ್ರಗಳ
ಭೂಮಿದೇವರಿಗೆ ಸುರನದಿಯ ತಟದಿ
ಶ್ರೀ ಮುಕುಂದಾರ್ಪಣವೆನುತ ಕೊಟ್ಟ ಫಲವಕ್ಕು
ಈ ಮಧ್ವನಾಮ ಬರೆದೋದಿದರ್ಗೆ
ಪುತ್ರರಿಲ್ಲದವರು ಸತ್ಪುತ್ರರೈದುವರು
ಸರ್ವತ್ರದಲಿ ದಿಗ್ವಿಜಯವಹುದು ಸಕಲ
ಶತ್ರುಗಳು ಕೆಡುವರಪಮೃತ್ಯು ಬರಲಂಜುವುದು
ಸೂತ್ರನಾಮಕನ ಸಂಸ್ತುತಿಮಾತ್ರದಿ
ಶ್ರೀಪಾದರಾಯ ಪೇಳಿದ ಮಧ್ವನಾಮ ಸಂತಾಪ ಕಳೆದವಿಳ

ಸೌಖ್ಯಗಳ ನೀವುದು
ಶ್ರೀಪತಿ ಜಗನ್ನಾಥವಿಠಲನ ತೋರಿ ಜನ ಕೂಪಾರದಿಂದ
ಕಡೆ ಹಾಯಿಸುವುದು

ಶ್ರೀಪಾದರಾಜರ ಅನುಭವದ ತತ್ವಜ್ಞಾನದ ನುಡಿಕಿಡಿಗಳು ಅವರ ಕೀರ್ತನ ತರಂಗಿಣಿಯಾಗಿ ಹರಿದು ಸಾಹಿತ್ಯ ಶ್ರೀಮಂತಿಕೆಯ ಲಾಲಿತ್ಯ ಶೈಲಿಯಲ್ಲಿ ಮೂಡಿಬಂದಿವೆ ದಂಡ–ಕಮಂಡಲದ ಸನ್ಯಾಸಿಗಳಾಗಿ ಮಾತ್ರವೇ ಉಳಿಯದೆ ದಂಡಕ. ವೃತ್ತನಾಮ ಉಗಾಭೋಗ ಸುಳಾದಿ ಕೀರ್ತನೆಗಳಿಂದ ಹರಿದಾಸ ಸಾಹಿತ್ಯ ವೈಭವದ ದಿವ್ಯದೀವಿಗೆಯನ್ನು ಹಚ್ಚಿಟ್ಟ ಶ್ರೀಪಾದರಾಜರು ವೈಷ್ಣವೀಯ ಪ್ರತಿಭಾ ಪಾಂಡಿತ್ಯಗಳ ವೈರಾಗ್ಯ ಸೌಭಾಗ್ಯ ನಿಧಿಗಳು ಶ್ರೀಪಾದರಾಜರ ಕೀರ್ತನೆಗಳು ಇಂದಿಗೂ ಪ್ರತಿಯೊಬ್ಬ ಆಸ್ತಿಕ ಬಂಧುವಿನ ಹೃದಯದ ಹಾಡಾಗಿ ಎಲ್ಲರ ನಾಲಿಗೆಯ ನುಡಿಯಾಗಿ ಅಂತರಂಗದ ಭಕ್ತಿಯ ಮಿಡಿತವಾಗಿ ನಿನದಿಸುತ್ತಿವೆ ಭಗವಂತನ ಹಿರಿಮೆ ಭಗವದ್ಭಕ್ತಿಯ ಗರಿಮೆಗಳು ಶ್ರೀಪಾದರಾಜರ ಕೃತಿಗಳಲ್ಲಿ ಸಮಗ್ರ ಪ್ರತಿಮೆಯಾಗಿ ನಿಂತು ಆ ಪ್ರತಿಭಾ ವ್ಯಕ್ತಿತ್ವ, ಅವರ ಪ್ರತಿಭಾ ವ್ಯಕ್ತಿತ್ವದೊಡನೆ ಬೆರೆತು ಪದಪದಗಳಲ್ಲಿಯೂ ಪ್ರವಹಿಸಿ ಪದಪುಂಜ ಕಾವ್ಯಾದಿಗಳಲ್ಲಿ ಭಗವತ್ಸಾಕ್ಷಾತ್ಕಾರ ಕಾಣುವಂತಾಗಿದೆ ಆತ್ಮದಂಡನೆಗಿಂತಲೂ ದೇಹದಂಡನೆಗಿಂತಲೂ, ಭಗವಂತನ ಪದತಲದಲ್ಲಿ ಸರ್ವಸಮರ್ಪಣ ಮಾಡಿ ಆತನ ಇಚ್ಛೆಯಂತೆ ನಾವಿರಬೇಕಾದ ಮಾರ್ಗದ ರೂವಾರಿಗಳು ಶ್ರೀಪಾದರಾಜರು

ಶ್ರೀಪಾದರಾಜರು ದ್ವೈತದರ್ಶನದ ಪ್ರಸಾರ ಕಾರ್ಯದಲ್ಲಿ ಇಟ್ಟ ದೀಕ್ಷಾ ದಕ್ಷತೆಗಳು ಅವರ ದಾಸಸಾಹಿತ್ಯ ಪ್ರಚಾರದ ದೃಷ್ಟಿಯಿಂದ ಉತ್ತಮ ಹಿನ್ನೆಲೆಯನ್ನೊದಗಿಸಿದ್ದವು ಶ್ರೀಪಾದರಾಯರು ಕನ್ನಡ ಸಾಹಿತ್ಯಕ್ಕೆ ಭಗವದ್ಭಕ್ತರಿಗೆ, ದಾಸಕೂಟಸ್ಥರಿಗೆ ಮಾಡಿರುವ ಉಪಕಾರ ಬಹುಸ್ಮರಣೀಯವಾದುದು ಸಂಸ್ಕೃತ ಮಂತ್ರಮಾತುಗಳಲ್ಲಿಯ ಮಂಗಳಾತ್ಮಕ ಪಾವಿತ್ರ್ಯವನ್ನು ಕನ್ನಡಕ್ಕೆ ತಂದುಕೊಟ್ಟ ಕೀರ್ತಿಗೆ ಶ್ರೀಪಾದರಾಜರು ಭಾಜನರಾದರು ದಾಸಸಾಹಿತ್ಯ ಎಂಬ ಹೊಸ ಕಲ್ಪನೆಯೊಂದು ಅವರ ಬೃಹತ್ ವ್ಯಕ್ತಿತ್ವದಿಂದ ಪಲ್ಲವಿಸಿ ಕನ್ನಡ ಭಾಷೆ ಹಾಗೂ ಸಾಹಿತ್ಯಗಳಿಗೆ ಹೊಸ ಆಯಾಮವನ್ನು ಮೂಡಿಸಿತು, ತಮ್ಮ

ಸಮರ್ಥ ವಾಗ್ವೈಖರಿಯಿಂದಾಗಿ ಕನ್ನಡದಲ್ಲಿ ಹೊಸದೊಂದು ರಮ್ಯದಾಸ್ಯ ಭಾವದ ಮಧುರಶೈಲಿಗೆ ಪ್ರವರ್ತಕರಾದವರು ಶ್ರೀಪಾದರಾಜರು. ಅವರಿಂದ ಸ್ಫೂರ್ತಿಗೊಂಡ ಅನೇಕ ಜನ ಯತಿಗಳು ವೈದಿಕರು, ಗೃಹಸ್ಥರು ಕನ್ನಡದಲ್ಲಿ ಧೈರ್ಯವಾಗಿ ಕೃತಿಗಳನ್ನು ರಚಿಸತೊಡಗಿದರು. ತೊರವೆ ರಾಮಾಯಣ ನಾರಣಪ್ಪನ ಭಾರತಗಳು ಶ್ರೀಪಾದರಾಜರ ನಂತರವೇ ಬಂದಿರುವುದು ಈ ಸ್ಥಿತಿಗೆ ನಿದರ್ಶನ. ಮುದುಡಿ ಮಲಗಿದ್ದ ಭಾಗವತ ಧರ್ಮ, ಮೈಚಳಿಬಿಟ್ಟು ಎದ್ದು, ಜಾಗೃತವಾಗಿ, ದೃಢವಾಗಿ ನಡೆಯಲು ಪ್ರಾರಂಭವಾಯಿತು. ಶ್ರೀಪಾದರಾಜರು ಮೈಮರೆತು ಭಾಗವತ ದಶಮಸ್ಕಂದವನ್ನು ಕನ್ನಡದಲ್ಲಿ ಹಾಡುಗಳನ್ನಾಗಿ ಹಾಡಿ ಭಾಗವತಧರ್ಮದ ಪ್ರವೇಶಕರೆನಿಸಿಕೊಂಡರು. ಅವರ ಹಾಡುಗಳು ಇಂದಿಗೂ ದಕ್ಷಿಣ ಭಾರತದ ಕರ್ನೂಲ್ ಜವಾಸಿ, ಶ್ರೀರಂಗ, ಸೇಲಂ, ಕುಂಭಕೋಣ ಕೊಯಮುತ್ತೂರು ಮುಳಬಾಗಿಲುಗಳಲ್ಲಿ ವ್ಯಾಪಕ ಪ್ರಚಾರದಲ್ಲಿವೆ.

ತಮ್ಮ ಕಾಲದಲ್ಲಿ ಸಂಸ್ಕೃತ ವಿದ್ಯೆಯು ಉನ್ನತ ಮಟ್ಟದಲ್ಲಿದ್ದರೂ, ಅದು ಭಕ್ತಿ ಪ್ರಚೋದನೆಗೆ ಹೆಚ್ಚು ತೀವ್ರವಾಗಿ ಪ್ರಯೋಜನವಾಗುತ್ತಿಲ್ಲವೆಂಬುದನ್ನು ಮನಗಂಡ ಶ್ರೀಪಾದರಾಜರು ದೇಶಕಾಲೋಚಿತವಾಗಿ, ವಿಜಯನಗರ ಸಾಮ್ರಾಜ್ಯದಲ್ಲಿ ಜನಸಾಮಾನ್ಯರಲ್ಲೂ ಹಿಂದೂ ಸಂಸ್ಕೃತಿ ಸಂಪ್ರದಾಯ ಪರಂಪರೆಗಳ ಬಗ್ಗೆ ಸುಲಭವಾಗಿ ತಿಳಿಸಿ ಸಂವೇದನೆಯನ್ನು ಪ್ರಚೋದಿಸಲು ದಾಸಪಂಥವನ್ನು ಉದ್ಘಾಟಿಸಿದರು. ಸಕಲ ತತ್ತ್ವ ವಿಷಯಗಳನ್ನೂ, ಸಂಗೀತ ಬದ್ಧವಾಗಿ ಕನ್ನಡದಂತಹ ಲಲಿತ ಭಾಷೆಯಲ್ಲಿ ಜನರಿಗೆ ಕೊಟ್ಟ ಶ್ರೀಪಾದರಾಜರು ಈ ಮಾರ್ಗದಲ್ಲಿ ತಾವೇ ಮೊದಲು ಕನ್ನಡದಲ್ಲಿ ದೇವರನಾಮಗಳನ್ನು ಉಗಾಭೋಗಗಳನ್ನು ಸುಳಾದಿಗಳನ್ನು ರಚನೆಮಾಡಿ ಗಂಭೀರವಾದ ಗಂಧರ್ವ ಕಂಠದಿಂದ ದೇವರೆದುರಿಗೆ ಗಾನಮಾಡಿ ತೋರಿಸಿದರು. ಸಂಗೀತ ಸಾಹಿತ್ಯಗಳ ಅಮೋಘ ಮೇಳವಾದ ಈ ಮಾರ್ಗ ದಿನೇ ದಿನೇ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸಲಾರಂಭಿಸಿತು. ಶ್ರೀಪಾದರಾಜರಿಂದ ಬಂದ ಪ್ರತಿ ಶಬ್ದವೂ ಬೀಜಾಕ್ಷರಾಭಿಮಾನಿ ದೇವತೆಗಳ ದಿವ್ಯಸುಂದರ ನರ್ತನವಾದವು. ಶ್ರೀಪಾದರಾಜರ ಈ ದಾಸಸಾಹಿತ್ಯ ಸೇವೆಯನ್ನು ಕಂಡ ಶ್ರೀವ್ಯಾಸರಾಜರು ತಮ್ಮ ಸಂಸ್ಥಾನದಲ್ಲಿ ಈ ಸಂಪ್ರದಾಯವನ್ನು ಸನ್ಮಾನಾದಿ ಉತ್ಸವ ಶ್ರದ್ಧೆಗಳಿಂದ ಘೋಷಿಸಿ, ದಾಸ

ಸಾಹಿತ್ಯದ ಭವ್ಯ ಭವಿತವ್ಯಕ್ಕೆ ಅತ್ಯುತ್ತಮ ಅಡಿಪಾಯವನ್ನು ಹಾಕಿದರು. ಹೀಗೆ ವ್ಯಾಸದಾಸ ಸಾಹಿತ್ಯ ಸಾಮ್ರಾಜ್ಯ ಮುಕುಟಮಣಿಗಳಾಗಿ ಮೆರೆದ ಶ್ರೀ ಪಾದ ರಾಜ ವ್ಯಾಸರ ಪ್ರಭಾವಳಿಯಲ್ಲಿ ಮುಂದೆ ಶ್ರೀ ಪುರಂದರದಾಸರು. ಶ್ರೀವಾದಿ ರಾಜರು ಶ್ರೀ ಕನಕದಾಸರು ಮುಂತಾದ ಅಪೂರ್ವ ರತ್ನಗಳು ಅಲಂಕೃತ ವಾದವು

ಶ್ರೀ ಪಾದರಾಜರು ರಂಗವಿಠಲ ಎಂಬ ಅಂಕಿತದಿಂದ ತಮ್ಮ ಪದಪದ್ಯ ಸುಳಾದಿಗಳನ್ನು ರಚಿಸಿದರು ಹರಿಸರ್ವೋತ್ತಮತ್ವ ಜಗತ್ಸತ್ಯತ್ವ ತಾರತಮ್ಯ ಪಂಚಭೇದ ಮುಂತಾದ ಮೂಲಭೂತ ತತ್ವಗಳನ್ನು ಕನ್ನಡದಲ್ಲಿ ಸಕಲಸಜ್ಜನರಿಗೂ ಮನದಟ್ಟಾಗುವಂತೆ ಮೃದುಶೈಲಿಯಲ್ಲಿ ಅಭಿವ್ಯಕ್ತಿಸಿದರು ಭಾಗವತ ದರ್ಶನಗಳು ಭಕ್ತಿಯನ್ನು "ನಿರವಧಿಕ ಅನಂತ ಅನವದ್ಯ ಕಲ್ಯಾಣಗುಣತ್ವ ಜ್ಞಾನ ಪೂರ್ವಕ ಸ್ವಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕೋ ಅಂತ ನವಸ್ನೇಹಾಯಿ ಅಪ್ರತಿಬದ್ಧೋ ನಿರಂತರ ಪ್ರೇಮಪ್ರವಾಹ ಎಂದು ವ್ಯಾಖ್ಯಾನ ಮಾಡಿರುವುದನ್ನೇ ಶ್ರೀಪಾದರಾಜರು ತಮ್ಮ ಉತ್ಕಟ ಸರಳ ಭಕ್ತಿಗೀತೆಗಳ ಪ್ರವಾಹ ರೂಪದಲ್ಲಿ ಪ್ರಕಟಿಸಿದರು ಧರ್ಮ, ನೀತಿ ಮತ್ತು ಲೋಕಾನು ಭವವನ್ನು ಆಕರ್ಷಕ ಶೈಲಿಯಲ್ಲಿ ಜನತೆಗೆ ಉಪದೇಶಿಸುವದಕ್ಕಾಗಿ ಶ್ರೀಪಾದ ರಾಜರು ಸಂಕ್ಷಿಪ್ತ ಸುಂದರವಾದಂತಹ ಉಗಾಭೋಗಗಳನ್ನು ಪ್ರಚಾರಕ್ಕೆ ತಂದರು

ಶ್ರೀ ಹರಿಯನ್ನು ಸತತ ಬೇಡುತ್ತಾ, ಶ್ರೀ ಹರಿಯ ಚರಣಧೂಳಿಯಲ್ಲಿ ದಾಸ್ಯ ಭಾವವುಳ್ಳ ದಾಸರ ದಾಸರಿಗೆ ದಾಸಾನುದಾಸನಾಗಿ ಹುಟ್ಟುವ ಬಯಕೆಯನ್ನು ಹೊತ್ತು ದಾಸ್ಯ ಭಾವವನ್ನು ಎಲ್ಲೆಡೆಯೂ ನಿರೂಪಿಸಿದರು ಸದಾ ಭಗವಂತನ ಗುಣಗಳನ್ನು ಸ್ಮರಿಸುವ ಅವನ ಗಾನಗಳನ್ನು ಹಾಡುವ, ಅವನನ್ನು ಪೂಜಿಸುವ, ಭಾಗ್ಯಕ್ಕಾಗಿ ಬೇಡಿದರು ರೆಕ್ಕೆ ಬರದ ಹಕ್ಕಿಯ ಮರಿಗಳು ತಾಯನ್ನು ಆಶ್ರಯಿಸುವಂತೆ, ಕರುಗಳು ಹಸುವಿನ ಹಿಂದೆ ಹೋಗುವಂತೆ, ಸದಾ ಭಗವಂತನನ್ನು ಹಿಂಬಾಲಿಸುವ ಹಂಬಲ ಹೊತ್ತ ಹರಿದಾಸರ ತಂಡವೊಂದನ್ನು ನಿರ್ಮಿಸಿದರು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ ದಾಸ್ಯ ಸಖ್ಯ, ಆತ್ಮ ನಿವೇದನಗಳೆಂಬ ನವವಿಧಭಕ್ತಿಯನ್ನು ಅತಿ ವೈಶಿಷ್ಟ್ಯ,

ಪೂರ್ವಕವಾಗಿ ತಮ್ಮ ವಿವಿಧ ಕೀರ್ತನೆ ಸುಳಾದಿಗಳಲ್ಲಿ ವ್ಯಕ್ತಪಡಿ ಭಗವಂತನನ್ನು ಆರಾಧಿಸುವ ಸಂಪ್ರದಾಯವೊಂದನ್ನು ವ್ಯಾಪಕವಾಗಿ ವ್ಯವಸ್ಥೆಗೊಳಿಸಿದರು. ನಾರದ ಭಕ್ತಿ ಸೂತ್ರದ ಮೂಲಭೂತ ಆಸಕ್ತಿ ರೂಪಗಳಾದ ಗುಣ ಮಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ದಾಸ್ಯಾಸಕ್ತಿ, ಸ್ಮರಣಾಸಕ್ತಿ, ಸಖ್ಯಾಸಕ್ತಿ, ಕಾಂತಾಸಕ್ತಿ, ವಾತ್ಸಲ್ಯಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ವಿರಹಾಸಕ್ತಿಗಳೆಂಬ ಏಕಾದಶವಿಧ ಭಕ್ತಿಯಾಸಕ್ತಿಗಳನ್ನು ಮುಂದಂದಿಗೂ ಹರಿದಾಸ ಸಾಹಿತ್ಯದಲ್ಲಿ ನಿರಂತರ ಪ್ರವಹಿಸುವಂತ ಪ್ರಭಾವಪೂರ್ಣವಾಗಿ ತಮ್ಮ ಕಾವ್ಯಗಳಲ್ಲಿ ಬಳಕೆಗೆ ತಂದು ಶತಶತಮಾನಗಳ ಪ್ರೇರಕಶಕ್ತಿಯಾದರು. ತಮಿಳು ನಾಡಿನ ಆಳ್ವಾರರುಗಳ ಮಧುರಭಕ್ತಿಯನ್ನು ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ಅತ್ಯಂತ ದಿಟ್ಟವಾಗಿ, ಅನನ್ಯವಾಗಿ ತಮ್ಮ ಕೀರ್ತನೆಗಳಲ್ಲಿ ಒಡಮೂಡಿಸಿದವರೆಂದರೆ ಶ್ರೀಪಾದರಾಜರು. ಪರಮಾತ್ಮನ ವಿರಹದಿಂದ ಸಂತಪ್ತರಾದ ಗೋಪಿಯರ ಚಿತ್ತವೃತ್ತಿಯ ವಿವಿಧ ಭಾವಾಭಿಗೀತದ ಹದವನ್ನು ನಾದವನ್ನೂ ನೋವನ್ನೂ ವಿರಹದ ಉತ್ಕಟ ಬಯಕೆಯನ್ನು ತಮ್ಮದೇ ಆದ ಪರಿಣಾಮಕಾರೀ ಶೈಲಿಯಲ್ಲಿ ವ್ಯಕ್ತಪಡಿಸಿದ ಶ್ರೀಪಾದರಾಜರು ಭ್ರಮರಗೀತೆಯನ್ನು ಗೋಪಿಯರನ್ನು ಕಣ್ಣು ಮುಂದೆ ಬಂದು ನಿಲ್ಲುವಂತೆ ಭಾವಪರವಶರಾಗಿ ಕೃಷ್ಣನನ್ನು ಕಾಣುವ ತವಕದಿಂದ ಬರೆದು ವಿರಹಭಾವದ ನಾಂದಿ ಸಂದೇಶವನ್ನು ಜಗತ್ತಿಗೆ ಕೇಳಿಸಿದರು.

ಶ್ರೀಪಾದರಾಜರು ಕಂತುಪಿತನನ್ನು ಅಂತರಂಗದಲ್ಲಿ ಸಂತತ ನೆನೆವಂತೆ ಚಿಂತನೆ ಮಾಡುತ್ತಲೇ ಇರುವ ಮಂಗಳಾತ್ಮಕರು. ಬಾರಿಬಾರಿಗೂ ಬರುವ, ದಾರಿದ್ರ್ಯ ದುಃಖವನ್ನು ದೂರ ಮಾಡುವ ದಾರಿ ತೋರಿಸಲೆಂದು ಪರಮ ಪಾವನನಾದ ಪರಮಾತ್ಮನನ್ನು ಪ್ರಾರ್ಥಿಸುವ ಪವಿತ್ರಾತ್ಮರು. ಬಾಳೊಳಗದ್ದು ನೀರೊಳಗದ್ದು ಹರಿಯೆ ನಿನ್ನ ನಂಬಿದೆನೋ ಎನ್ನುವ ಶ್ರೀ ಪಾದರಾಜರು ಸುಖ ದುಃಖ ಸಮಾಕೃತ್ವಾ ಎಂಬಂತೆ ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ ಎಂದು ಅನನ್ಯ ಶರಣಾಗತಿಯಿಂದ ಭಗವಂತನನ್ನು ಬೇಡುತ್ತಾರೆ. ಕ್ಷಣಕ್ಷಣಕ್ಕೂ ನಾವು ಮಾಡುವ ಅಗಣಿತ ಪಾಪಗಳನ್ನು ಮನ್ನಿಸು ಕಾಪಾಡು ಎಂದು ದೀನರಾಗಿ ಮೊರೆಹೋಗುತ್ತಾರೆ. ಪ್ರತಿಯೊಬ್ಬರೂ ದಾಸ್ಯ ಭಾವದ ಶುದ್ಧ ಜ್ಞಾನದಿಂದ

ಪರಿಪಕ್ವರಾಗಬೇಕು ಭಕ್ತಿರಥದಲ್ಲಿ ಮುಕ್ತಿಪದದತ್ತ ಸಾಗಬೇಕು ಎಂದು ಶುದ್ಧಾಂತಃಕರಣದಿಂದ ಕರೆ ನೀಡುತ್ತಾರೆ

ಮುದ್ದುಕೃಷ್ಣನನ್ನು ಆರಾಧಿಸುವಾಗಲಂತೂ ಪರಮಾತ್ಮನ ಪ್ರೇಮ ರಸದಲ್ಲಿ ಪಲ್ಲವಿಸುವ ಪುಷ್ಪವಾಗುತ್ತಾರೆ ಶ್ರೀವಾದರಾಜರು ಗೋಪೀಗೀತ ರಚನೆಯಲ್ಲಂತೂ ಶ್ರೀವಾದರಾಯರು ತಮ್ಮನ್ನು ತಾವೇ ಮರೆತು ಗೋಪಿಯರಲ್ಲಿ ಒಂದಾಗುತ್ತಾರೆ ಕೃಷ್ಣ ಮಧುರೆಗೆ ಹೊರಟಾಗ ಗೋಪಿಯರ ಮನಸ್ಸಿನ ವಿಹ್ವಲತೆಯನ್ನು ವರ್ಣಿಸುವ ಶ್ರೀವಾದರಾಜರು ಅಸದೃಶಕಾವ್ಯದ ಅಪಾರ ಶಕ್ತಿಯ ರಸದೌತಣವನ್ನೇ ನೀಡುತ್ತಾರೆ, ಶ್ರೀ ಕೃಷ್ಣನಲ್ಲಿ ಗೋಪಿಯರಿಗಿದ್ದ ಅನನ್ಯ ವಿಶ್ವಾಸ ಪ್ರೀತಿವಾತ್ಸಲ್ಯಗಳ ಪೂರ್ಣ ಪರಿಚಯವಿದ್ದ ಶ್ರೀವಾದ ರಾಜರು

'ಪಿತ್ರ ತಾಯಿ ಅಣ್ಣಬಂಧು ಗೋತ್ರಗತಿ ನೀನೆ ನಮ್ಮ
ಚಿತ್ತವೆಂದು ನಂಬಿ ನಿನ್ನ ಹತ್ತಿಲಿ ಸಾರಿದವರ
ಒತ್ತಿ ತಾಂ ರಥವನೇರಿ ನತ್ವರೆ ಬರುವನೆಂದು
ಮತ್ತಕ್ರೂರನೊಡನೈದಿದ ಹೇ ಕಿತವಾ
ಎಂದು ಅವರ ಅಂತರಂಗವನ್ನು ಬಿಚ್ಚಿಡುತ್ತಾರೆ

ನವವಿಧಭಕ್ತಿಗಳನ್ನು ನವನವೀನವಾದ ಸಿದ್ಧಾಂತ ಶೈಲಿಯಿಂದ ಪ್ರತಿಪಾದಿಸುವ ಶ್ರೀವಾದರಾಜರು ತಮ್ಮ ವಾತ್ಸಲ್ಯ ವಿರಹ ಮಧುರ ಭಾವಗಳಲ್ಲಿ ಕಾವ್ಯಶಕ್ತಿಯ ಉತ್ತುಂಗ ಶೃಂಗವನ್ನೇರುತ್ತಾರೆ ಕವಿಹೃದಯದ ಶ್ರೀವಾದರಾಜರು ಮೂಲಭೂತವಾಗಿ ರಸದ್ರಷ್ಟಾರರು

ಬಂದ ನೋಡಿದಾ । ಸದ್ದುಮಾಡದಿಂದಾ ಮಧುರಾನಗರಾ
ಇಂದೀವರಾಕ್ಷರಾನಂದ । ಸಿಂಧುವೀಗೊದೀತಾ ಪೂರ್ಣಾ
ಚಂದ್ರಾನಂತೊಪ್ಪುವಾರಿ ಸಿರಿ । ಮಂದರಧಾರಾ ನಂಪ್ರೀಯ
ಪೊಂದೋ ಭಾಗ್ಯಕೆಣೆಯುಂಟೇ । ಶ್ರೀ ಹರಿಯಾ ॥
ಅಂದಮ್ಮೊಳೂ ರಾಸಕ್ರೀಡೆಯಿಂದಾ ಬಂದಾವಾರಾದಾವಾ
ನೊಂದನೇಣೇನಾದೇನಾಲಾ । ಹೆಂದೂ ಬಿನ್ನೈಸಿ ಸಾಷ್ಟಾಂಗಾ

ದಿಂದಾ ವಂದಿಸುವೆ ಭಕ್ತಬಂಧುವಿಗೆ ಎನ್ನ ಹೃದಯಾ
ಮಂದಿರದೊಳಗೆಂದೆಂದಿರಲೆಂದೂ । ಏಕಿತವಾ

ಹೀಗೆ ಕನ್ನಡ ಪದ್ಯಗಳನ್ನು ಚಮತ್ಕಾರವಾಗಿ ಮಾಡಿಸುವ ಶ್ರೀಪಾದರಾಜರು ಸಂಗೀತಕ್ಕೆ ತಕ್ಕಂತೆ ಭಾಷೆ, ಭಾಷೆಗೆ ತಕ್ಕಂತೆ ರಾಗ, ಮುಂತಾದ ವಿರಹಗೀತವನ್ನು, ಭಕ್ತಿಸುಧೆಯ ರಸಪಾಕವಾಗಿ ಕಡೆದಿಟ್ಟಿದ್ದಾರೆ ಕೃಷ್ಣನನ್ನು ಅಗಲಿದ ಮೇಲೆ ತಾವು ಪಡುವ ವೇದನೆಗಿಂತಲೂ, ಅಗಲಬೇಕಾಗುತ್ತದಲ್ಲಾ ಗತಿಯೇನು ಎಂದು ತಲ್ಲಣಗೊಳ್ಳುವ ಗೋಪಿಯರ ಹೃದಯ ಶ್ರೀಪಾದರಾಜರಿಗೆ ಮಾರ್ಗದರ್ಶಕವಾಗಿದೆ

ಮನೆಯಿಂದ ಸಂತೋಷ ಕೆಲವರಿಗೆ ಲೋಕದೊಳು
ಧನದಿಂದ ಸಂತೋಷ ಕೆಲವರಿಗೆ ಲೋಕದೊಳು
ಸತಿಯಿಂದ ಸಂತೋಷ ಕೆಲವರಿಗೆ ಲೋಕದೊಳು
ಸುತರಿಂದ ಸಂತೋಷ ಕೆಲವರಿಗೆ ಲೋಕದೊಳು
ಇನಿತು ಅವರವರ ಸಂತೋಷ ಅವರವರಿಗಿರಲಿ
ಎನಗೆ ನಿನ್ನಲಿ ಸಂತೋಷ ರಂಗವಿಠಲ

ಎಂದು ಭಗವಂತನ ಪದಚರಣಗಳನ್ನು ಗಟ್ಟಿಯಾಗಿ ಹಿಡಿದು ಸಂತೋಷದ ಪೂರ್ಣ ಪ್ರವಾಹದಲ್ಲಿ ತೇಲುವ ಶ್ರೀಪಾದರಾಜರು ಭಗವದ್ಭಕ್ತಿಯ ಪ್ರಭಾವವನ್ನು ತಮ್ಮ ಪದಸರದಲ್ಲೆಲ್ಲಾ ಪರಿಣಾಮಕಾರಿಯಾಗಿ ಒಡಮೂಡಿಸುತ್ತಾರೆ

ಭವವೆಂಬ ಅಡವಿಯಲ್ಲಿ ತಾಪತ್ರಯದಿ ಸಿಲುಕಿ
ಭಯಗೊಳ್ಳದಂತೆ ಗೆಲ್ಲಿಪ್ಪದಕೆ ಶ್ರೀಹರಿನಾಮ
ಹೊರತಾಗಿ ಮತ್ತುಂಟೆ ಎನ್ನ ಮನವ ನಿನ್ನ
ಚರಣದೊಳಿಟ್ಟು ಸಲಹೋ ಸ್ವಾಮಿ ರಂಗವಿಠಲ

ಎಂದು ಕ್ಷಣಕ್ಷಣಕ್ಕೂ ಶ್ರೀಹರಿ ನಾಮ ಮಹಿಮೆಯನ್ನು ಸಾರೋದ್ಧಾರವಾಗಿ ಸಾರುತ್ತಾರೆ

ಶ್ರೀಪಾದರಾಜರ ಕಾವ್ಯದಲ್ಲಿ ಪ್ರೇಮಗೀತೆಯ ಇಂಪಿರುವಂತೆಯೇ, ಛಣಕ, ವಿಡಂಬನೆ, ನಿಂದಾಸ್ತುತಿಗಳು ಸಹ ಸಮೃದ್ಧವಾಗಿ ಲಭಿಸುತ್ತವೆ.

ಶನಿಕನಂತೊಲ್ಲೆನಪ್ಪ ಕುಂಟಿ ನಡೆಯುವನ
ವಾಯುವಿನಂತೊಲ್ಲೆನಪ್ಪ ದಂಡ್ರ ಬೀಸುವನ
ಇಂದ್ರನಂತೊಲ್ಲೆನಪ್ಪ ಮೈಗಣ್ಣನವ
ಚಂದ್ರನಂತೊಲ್ಲೆನಪ್ಪ ಕ್ಷಯರೋಗದವನ
ಸೂರ್ಯನಂತೊಲ್ಲೆನಪ್ಪ ಉರಿದು ಮೂಡುವನ
ಹರನಂತೊಲ್ಲೆನಪ್ಪ ಹಣೆಗಣ್ಣನವನ
ಜನಕೆಲ್ಲ ಚೆಲುವನ ಜಗಕೆ ಒಡೆಯನ
ತಂದುತೋರೇ ನಮ್ಮ ರಂಗವಿಠಲನ'

ಎಂದು ರಂಗವಿಠಲನ ಸೌಂದರ್ಯವನ್ನು ಹೃದಯ ತುಂಬಿ ಹೆಮ್ಮೆಯಿಂದ ಸ್ತುತಿಸುತ್ತಾರೆ

ಯಜ್ಞಯಾಗಾದಿಗಳು ವ್ರತಹೋಮಾದಿ ಜಪತಪಗಳು ಈ ಕಲಿಯುಗದಲ್ಲಿ ಕಷ್ಟಸಾಧ್ಯವೆನ್ನುವುದನ್ನು ಮನಗಂಡ ಶ್ರೀಪಾದರಾಜರು ಕಲಿಯುಗದಲ್ಲಿ ಕೇವಲ ಹರಿ ನಾಮಸ್ಮರಣೆಯಿಂದ ಭಗವಂತನ ಸಾಕ್ಷಾತ್ಕಾರವಾಗುತ್ತದೆ ಎನ್ನುತ್ತಾರ

"ಧ್ಯಾನವು ಕೃತಯುಗದಿ ಯಜ್ಞ ತ್ರೇತಾಯುಗದಿ
ದಾನವಾರಿಯ ದೇವತಾರ್ಚನೆಯು ದ್ವಾಪರದಿ
ಆ ನರರಿಗೆಷ್ಟು ಫಲ ಈ ಕಲಿಯುಗದಲ್ಲಿ
ಗಾನದಿ ಕೇಶವನ ರಂಗವಿಠಲನೆನಲು—ಹಾಗೆಯೇ
"ಕಲಿಕಾಲಕೆ ಸಮಯುಗವಿಲ್ಲವಯ್ಯ
ಕಲುಷ ಪರಿಹಿ ಕೈವಲ್ಯನೀವುದಯ್ಯ
ನಲಿ ನಾಮಕೀರ್ತನ ಸ್ಮರಣೆ ಸಾಕಯ್ಯ
ಸ್ಮರಿಸಲು ಸಾಯುಜ್ಯ ಪದವೀವುದಯ್ಯ
ಒಲವಿಂತ ಶ್ರೀರಂಗವಿಠಲನ ನೆನೆದರೆ
ಕಲಿಯುಗವು ಕೃತಯುಗವಾಗುವುದಯ್ಯ,

ಎಂದು ಮತ್ತೆ ಮತ್ತೆ ನಾಮಕೀರ್ತನೆಯ ಮಹತ್ವವನ್ನು ಮುಕ್ತಕಂಠದಿಂದ ಸಾರುತ್ತಾರೆ

ಅ ಮುಗುಳುನಗೆಯ ಆ ಸೊಬಗ
ಈ ಸುರತರು ನೆಳಲೀರತಿಯು
ಈ ಸುರತವನರಿದ ಬಾಲೆಯರೆಂತೊ
ಈ ಸುಗುಣಮಯ ರಂಗ ವಿಠಲನ ಕೆಳದಿ

ಶ್ರೀಕೃಷ್ಣ ಮಥುರೆಗೆ ಹೊರಟ ನಂತರ, ಬಾಡಿ ಬಸವಳಿದು ಅವನ ನೆನಪಿನ ತುಂತುರಿನಲ್ಲೇ ನೆನೆಯುತ್ತಾ ಬೃಂದಾವನಕ್ಕೆ ಬರುವ ಗೋಪಿಯರ ಮನಸ್ಸಿಗೆ ಹೃದಯಕ್ಕೆ, ಕಣ್ಣಿಗೆ ಆ ಪರಿಸರದ ಸಮಸ್ತ ದೃಶ್ಯವೂ ಸೊಬಗಿನ ಮುಗುಳು ನಗೆಯ ಮಾಧವನನ್ನೇ ಮತ್ತೆ ಮತ್ತೆ ನೆನಪಿಗೆ ತರುತ್ತಿದ್ದ ವಿರಹ ಭಾವ ಪ್ರಭಾವ ಪೂರ್ಣವಾಗಿ ಮೂಡಿಬಂದಿರುವ ಸುಳಾದಿ ಇದು

ಅರ್ಥಕಾಮಗಳ ವಿಷಯದಲ್ಲಿ ಅನಾಸಕ್ತಿ, ಸತ್ಯ, ಸದಾಚಾರ ಸಂಪನ್ನ ಬದುಕಿನಲ್ಲಿ ಆಸಕ್ತಿಯನ್ನು ತಮ್ಮದಾಗಿಸೆಂದು ಶ್ರೀ ಹರಿಯನ್ನು ಬೇಡುವ ಶ್ರೀ ವಾದಿರಾಜರು ತನ್ನ ನಂಬಿದ ಜನರ ಮತ್ತೆ ತಾನನ್ಯರಿಗೊಪ್ಪಿಸದ ಮನಸ್ಸಿನ ಭವ ಕಳೆದಿನ್ನು ಕಾಪಾಡುವ ಧನ್ಯ ಮಹಿಮ ಶ್ರೀರಂಗವಿಠಲ ಎಂದು ಉಳಿದ ಭಕ್ತರಿಗೂ ಭರವಸೆಯನ್ನು ನೀಡುವರು ಶ್ರೀವಾದಿರಾಜರಿಗೆ ಮಧ್ವಾಚಾರ್ಯರ ಹೆಸರೆತ್ತಿದರೆ ಅದೆಷ್ಟು ಉತ್ಸಾಹ, ಅಪಾರ ಸಂತೋಷ, ಆನಂದದ ತೆರೆಮಾಲೆಗಳು ಉಕ್ಕಿ ಭಕ್ತಿಭಾವ ತುಳುಕಿ ಪದಸುಮ ಜೇನಿನ ಸೋನೆಯ ವೃಷ್ಟಿ ಉಂಟು ಮಾಡುತ್ತದೆ ಇದು ಸಂಪ್ರದಾಯಬದ್ಧವಾಗಿ ಶಾಸ್ತ್ರೀಯ ಪರಿಮಿತಿಗಳಿಗನುಸಾರವಾಗಿ, ಹೃದಯದ ಅಂತರಾಳದಿಂದ ಅರಳುವುದು ಇವರ ಮಧ್ವನಾಮದಲ್ಲಿ ಅವರ ಭಾವ ಹನುಮಭೀಮರ ವಿಸ್ತೃತವನ್ನು ನೆನೆಗೆ ತರುತ್ತದೆ ಮಧ್ವನಾಮವನ್ನು ಹಾಡುವಾಗ ಶ್ರೀವಾದಿರಾಜರ ನಿರರ್ಗಳ ಸರಳ ಶಬ್ದ ಭಂಡಾರ ಜ್ಞಾನಗಂಧ ರಹಿತವಾದ ಜಡಶಕ್ತಿಗಳನ್ನು ಕೊಡವಿ ಧೀಶಕ್ತಿಯನ್ನು ಪ್ರಚೋದಿಸಿ ಜಾಗೃತ ಭಾವವನ್ನು ಪ್ರಕಟೀಕರಿಸುತ್ತದ ಆಚಾರ್ಯ ಮಧ್ವರ ಅನುಗ್ರಹ, ಪರಿಪೂರ್ಣತತ್ತ್ವದ ದಿವ್ಯಜ್ಞಾನ ಅವತಾರತ್ರಯಗಳ ಮಹಿಮಾ ವಿಶೇಷಗಳು ಶ್ರೀವಾದಿರಾಜರ ಮಧ್ವನಾಮವಾಗಿ ಮೂಡಿಬಂದಿವೆ ವಾಯುದೇವರು ತ್ರೇತಾಯುಗದಲ್ಲಿ ಹನುಮನಾಗಿಯೂ, ದ್ವಾಪರದಲ್ಲಿ ಭೀಮ

ನಾಗಿಯೂ ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ, ಅವತರಿಸಿ, ಜೀವೋತ್ತಮರೆನಿಸಿದ ತತ್ತ್ವಸಾರವನ್ನು ಈ ಮಧ್ವನಾಮ ಸಾರುತ್ತದೆ

ಪರಿಯ ಸಲ್ಲದ ಬಗೆಯ ಅಸ್ವರರು ಲೋಕದಲಿ
ಗುರುಕುಲತಿಲಕ ಮುಖ್ಯ ಪವಮಾನನು
ಜಯಜಯ ಜಗತ್ರಾಣ ಜಗದೊಳಗೆ ಸುತ್ರಾಣ
ನಿಮ್ಮ ಗುಣ ಸದ್ವಾಮ ಮಧ್ವನಾಮ

—ಎಂದು ವಾಯುದೇವರ ಹಿರಿಮೆಗರಿಮೆಗಳನ್ನು ಮಹಿಮೆ ವಿಶೇಷಗಳೊಡನೆ ಶ್ರೀಪಾದರಾಜರು ಪ್ರಕಟಪಡಿಸುತ್ತಾ "ಅಖಿಳ ವೇದಗಳ ಸಾರವ ನೋಡಿ ಮುನ್ನವನು ನಿಖಿಳ ವ್ಯಾಕರಣಗಳ ಸಹಿತ ಪೇಳಿದ ಮುಖದಲ್ಲಿ ಕಿಂಚಿತವಲ್ಲ ಇವಗೆಲ್ಲಿಂದು ಮುಖ್ಯಪ್ರಾಣನು ರಾಮನನುಕರಿಸಿದ" ಎಂದು ವ್ಯಾಕರಣ ಪಂಡಿತೋತ್ತಮನಾದ ಹನುಮನನ್ನು ಕೊಂಡಾಡುತ್ತಾರೆ. ಅದೇ ಹನುಮ ದ್ವಾಪರದಲ್ಲಿ 'ಚಂಡವಿಕ್ರಮನು ಗದೆಯನ್ನು ಹಿಡಿದು ಭೂಮಂಡಲದೊಳಿದಿರಾದ ಖಳರನ್ನು ಹಿಂಡಿಬಿಸುಟಿಹ ವೃಕೋದರನ ಪ್ರತಾಪವನು ಕಂಡು ನಿಲ್ಲುವರಾರು ತ್ರಿಭುವನದೊಳು' ಎಂಬಂತೆ ಭೀಮನಾಗಿ ಶ್ರೀಕೃಷ್ಣನ ಪರಮ ವಿಶ್ವಾಸಿಯಾಗಿ ಮೆರೆಯುತ್ತಾನೆ. ಭೀಮಸೇನದೇವರೇ ಕಲಿಯುಗದಲ್ಲಿ "ಮೌನನಿಧಿ ಮಧ್ವಮುನಿ ಎನಿಸಿ ಮಧ್ವಾಖ್ಯಂ ಮಂತ್ರಸಿದ್ಧಂ ಎನ್ನುವಂತ ಯುಗಪುರುಷರಾದರು. ಮಧ್ವಾಚಾರ್ಯರೇ ನಮ್ಮೆಲ್ಲರಿಗೂ ಸುಖಪ್ರದಾತರು, ಜ್ಞಾನಪ್ರದಾತರೂ, ಮೋಕ್ಷದಾತರೂ ಎಂಬುದನ್ನು ಹೇಳುತ್ತಾ "ತುಂಗಕುಲ ಗುರುವರನ ಹೃತ್ಕಮಲದೊಳಗಿರಿಸಿ ಭಂಗವಿಲ್ಲದ ಸುಖವ ಸುಜನರಿಂಗೆ, ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ ರಂಗವಿಟ್ಠಲನೆಂದು ನೆರೆನಂಬಿರೈ' ಎಂಬ ಸಂದೇಶವನ್ನು ಸಾರಿದ್ದಾರೆ

ಇಂತಹ ಪರಮ ಪವಿತ್ರವಾದ ಮಂತ್ರಸಿದ್ಧ ಮಧ್ವನಾಮ ಪ್ರತಿಮಾಧ್ವರ ಮನೆಮನೆಯಲ್ಲೂ ನಿನದಿಸುತ್ತಿರುವುದಕ್ಕೆ. ಇದರ ಫಲಶ್ರುತಿಯೇ ಕಾರಣ ಎಂದರೂ ಅತ್ಯುಕ್ತಿಯೇನಿಲ್ಲ. ಅಗಮ್ಯ ಮಹಿಮಾತ್ಮಕವಾದ ಈ ಮಧ್ವನಾಮಕ್ಕೆ ಜಗನ್ನಾಥದಾಸರು ಬರೆದಿರುವ ಫಲಶ್ರುತಿ, ಒಂದು ಧನ್ಯಕೃತಿ "ಸೋಮ ಸೂರ್ಯೋಪರಾಗದಿ ಗೋಸಹಸ್ರಗಳ ಭೂಮಿದೇವರಿಗೆ ಸುರನದಿಯ ತಟದಿ,

ಶ್ರೀ ಮುಕುಂದಾರ್ಪಣವೆನುತ ಕೊಟ್ಟ ದಳಪಕ್ಕೆ ಈ ಮುದ್ರನಾಮ ಒಲಿದಂದಿ ವರ್ಗ ಪುತ್ರರಿಲ್ಲದವರು ಸತ್ಪುತ್ರರ್ಪಡೆವರು ಸರ್ವತ್ರದಲಿ ಬಿಟ್ಟುಬಿಡುವರು. ಸಕಲಪತ್ರಗಳು ಕೆಡುವರಪಸ್ತುಕ್ತು ಒದಲಿಂದುವುದು ಸಂತ್ರನಾಮಕನ ಸಂಸ್ಕೃತಿಮಾತ್ರದಿ, ಶ್ರೀವಾದರಾಜ ಪೇಳ್ದ ಮುದ್ರನಾಮ ಸಂದಾವ ಕೇಳುವ ಸೌಖ್ಯವನೀವುದು, ಶ್ರೀಪತಿ ಜಗನ್ನಾಥ ವಿಠಲನ ತೋರಿಸುವ ಕೃಪಾರದಿಂದ ಕಡೆದಾಯಿಸುವುದು.

ಪ್ರತಿಯೊಬ್ಬರಿಗೂ ಭಕ್ತಿ ಬೇಕು ವಿರಕ್ತಿ ಬೇಕು. ಸರ್ವಶಕ್ತ ಬೇಕು. ಮುಕ್ತಿಯು ಆಗತ್ಯವಿದ್ದಲ್ಲಿ ಹಂಬಲವಿದ್ದಲ್ಲಿ ಏನುಏನನ್ನು ಸ್ಪಷ್ಟವಾಗಿ ಪ್ರಕಟಿಸುವ ಶ್ರೀವಾದರಾಜರು ಸತಿ ಅನುಕೂಲವಾಗಿರಬೇಕು ಸಾತನಲ್ಲಿ ಗುಣ ಬೇಕು, ಮತಿವಂತನಾಗಬೇಕು ಮತ ಒಂದಾಗಿರಬೇಕು ಜನದ ಜಾಣುವ ಬೇಕು, ತಪಸೇವೆಬೇಕು ಉಪವಾಸವ್ರತ ಬೇಕು ಉಪಶಾಂತವಿರಬೇಕು. ಸತ್ಸಂಗ ಬೇಕು, ದುಸ್ಸಂಗ ಬಿಡಬೇಕು ರಂಗವಿಠಲನ್ನ ಬಿಡದ ಸವಿ ನೆನೆಯಬೇಕು ಎಂದು ಮುಕ್ತಿಯ ಮೆಟ್ಟಿಲುಗಳನ್ನು ತೋರಿದ್ದಾರೆ

ಯಾರಿಗೆ ಯಾವುದು ಭೂಷಣ ಎಂಬುದನ್ನು ಅತ್ಯಂತ ಅರ್ಥಪೂರ್ಣವಾಗಿ ನಿರೂಪಿಸುವ ಶ್ರೀವಾದರಾಜರು, ನಾಲಿಗೆಗೆ ಭೂಷಣ ನಾರಾಯಣ ನಾಮ, ಕಾಲಿಗೆ ಭೂಷಣ ಪರಿಯಾತ್ರ, ಮನೆಗೆ ಭೂಷಣ ತುಲಸಿ ವೃಂದಾವನ, ಕಿವಿಗೆ ಭೂಷಣ ಹರಿಕಥೆ, ದಾನವೇ ಭೂಷಣ ಕೈಗಳಿಗೆ ಮೌನವೇ ಭೂಷಣ ಮಾನವರಿಗೆ, ಜ್ಞಾನವೇ ಭೂಷಣ ಮುನಿಯೋಗಿವರರಿಗೆ ಮಾನಿನಿಗೆ ಭೂಷಣ ಪತಿಭಕ್ತಿಯು, ಎಂದು ಪ್ರತಿ ವಿಚಾರಕ್ರಿಯೆಗಳನ್ನು ಸನ್ಮಾರ್ಗದ ದಾರಿಯನ್ನಾಗಿ ಮಾಡುತ್ತಾರೆ

ಶ್ರೀವಾದರಾಜರಿಗೆ ಶ್ರೀರಂಗದ ರಂಗನಾಥನನ್ನು ಕಂಡಾಗ ಅಪಾರ ಮಮತೆ ಭಕ್ತಿ. ಪ್ರೇಮೋನ್ಮಾದ ಕಾವೇರಿ ರಂಗನನ್ನು ನೋಡದ ಕಂಗಳು ಇದ್ದರೇನು ಇಲ್ಲದಿದ್ದರೇನು, ಎನ್ನುವ ಶ್ರೀವಾದರಾಜರು ಜಗಂಗಳಿಗೆ ಅತಿ ಮಂಗಳಮೂರ್ತಿಯಾಗಿರುವ ಶ್ರೀರಂಗನಾಥನ ದರ್ಶನದ ಭಾಗ್ಯವಂತರಾಗಲು ಎಲ್ಲರಿಗೂ ಕರೆ ನೀಡುತ್ತಾರೆ

ಶ್ರೀಪಾದರಾಜರ ಸಾಹಿತ್ಯದಲ್ಲಿ ಶ್ರೀ ಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕವು ಅತ್ಯಂತ ಮಹತ್ವಪೂರ್ಣವಾದುದು ಭಾಗವತ ಸಪ್ತಮಸ್ಕಂಧದ ಪ್ರಹ್ಲಾದರ ಕಥೆ ನರಸಿಂಹಾವತಾರದ ವಿವರಗಳ ಹಿನ್ನಲೆಯಲ್ಲಿ ಹರಿಯುವ ಈ ದಂಡಕ ಅಮೂಲ್ಯ ಸಾಹಿತ್ಯಕೃತಿ. ಸಂಕ್ಷಿಪ್ತ ಮಹಾಕಾವ್ಯದ ಮಾದರಿಯಲ್ಲಿರುವ ಈ ದಂಡಕ ರಗಳೆ, ಮಹಾಕಾವ್ಯ, ಭಕ್ತಿಗೀತೆ, ಭಾವಗೀತೆಗಳ ತತ್ವ, ಮಹತ್ವ, ಲಕ್ಷಣಗಳನ್ನು ಹೊಂದಿದ್ದು ತನ್ನ ನಿರರ್ಗಳವಾದ, ಸುಭಗವಾದ, ಸುಸಂಸ್ಕೃತ ಶೈಲಿವಿನ್ಯಾಸದ ಶ್ರೀಪಾದರಾಜರ ಅಪೂರ್ವಸಾಹಿತ್ಯ ಭಾಗವಾಗುಳಿಯುತ್ತದೆ.

ಶ್ರೀಪಾದರಾಜರು ಅಂತರಂಗದ ಆತ್ಮಶೋಧನೆಗೆ ಹೆಚ್ಚು ಗಮನವಿತ್ತು ಆಡಂಬರ ಬೂಟಾಟಿಕೆಗಳನ್ನು ಖಂಡಿಸಿದರು "ಮುಖವ ತೊಳದು ನಾಮ ಬಳಕೊಂಡೆನಲ್ಲದ ಸುಖತೀರ್ಥಶಾಸ್ತ್ರವನೋದಿದೆನೇ, ಮುಖಶೃಂಗಾರಕ್ಕೆ ಮನಸೋತೆನಲ್ಲದೆ ಭಕುತಿ ರಸದಲ್ಲಿ ಮುಳುಗಿದೆನೇನಯ್ಯ" ಎಂದು ಆಚಾರ್ಯ ಶಾಸ್ತ್ರಪಾರಾಯಣದ ಆಗತ್ಯಗಳನ್ನು ಒತ್ತಿಹೇಳಿದರು "ಉಂಟಾದ ಕಾಲಕ್ಕೆ ನೆಂಟರು ಇಷ್ಟರು ಭಂಟರಂತೆ ಬಾಗಿಲ ಕಾಯ್ವರು, ಉಂಟಾದತನ ತಪ್ಪಿ ಬಡತನ ಬಂದೊದಗಲು ಬಂಟರಂತೆ ಮೋರೆ ತಿರುಹುವರಯ್ಯ' ಎಂದು ಬದುಕಿನ ಕಟುಸತ್ಯವನ್ನು ತೋರಿಸಿ ಲೋಕನೀತಿಯನ್ನು ಹೇಳಿದರು

ತಮ್ಮ ಬದುಕಿನ ಅತಿ ಪ್ರಮುಖ ಆಕಾಂಕ್ಷೆಗಳನ್ನು ಅಭಿವ್ಯಕ್ತಿಸುವ ಶ್ರೀಪಾದರಾಜರು "ನಾನಿನ್ನಲೇನೂ ಬೇಡುವುದಿಲ್ಲ, ಎನ್ನ ಹೃದಯ ಮಂಟಪದೊಳು ನಿಂದಿರೋ ಕೃಷ್ಣಾ,ಶಿರ ನಿನ್ನ ಚರಣದಲ್ಲೆರಗಲಿ, ಎನ್ನ ಚಕ್ಷುಗಳು ನಿನ್ನ ನೋಡಲಿ, ಕರ್ಣ ಗೀತಂಗಳ ಕೇಳಲಿ, ಎನ್ನ ನಾಸಿಕ ನಿರ್ಮಾಲ್ಯವಾಘ್ರಾಣಿಸಲಿ ಕೃಷ್ಣಾ, ನಾಲಿಗೆ ನಿನ್ನ ಕೊಂಡಾಡಲಿ, ಎನ್ನ ಕರಗಳೆರಡೂ ನಿನಗೆ ಮುಗಿಯಲಿ, ಪಾದ ತೀರ್ಥಯಾತ್ರೆ ಮಾಡಲಿ, ಬುದ್ಧಿ ನಿನ್ನೊಳು ಕುಣಿದಾಡಲಿ ಚಿತ್ತ ನಿನ್ನಲ್ಲಿ ನಲಿದಾಡಲಿ ಭಕ್ತಜನರ ಸಂಗ ದೊರೆಯಲಿ, ರಂಗವಿಠಲ ನಿನ್ನ ದಯವೊಂದಿರಲಿ" ಎಂದು ಕೇಳಿಕೊಳ್ಳುತ್ತಾರೆ

ಶ್ರೀಪಾದರಾಜರು ಗೋಪಿಗೀತ, ಭ್ರಮರಗೀತ, ಮತ್ತು ವೇಣುಗೀತಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ವೇಣುನಾದದ ತರಂಗಗಳನ್ನೆಬ್ಬಿಸಿ, ತನ್ಮಯತೆಯ

ಹೊಸ ಸಾರ್ಥಕತೆಯನ್ನು ಸಾಹಿತ್ಯಜೀವಿಗಳಿಗೆ ಒದಗಿಸಿಕೊಟ್ಟಿದ್ದಾರೆ ತಿರುಪತಿಯ ಶ್ರೀನಿವಾಸನನ್ನು ಕಂಡರಂತೂ ಶ್ರೀ ಪಾದರಾಜರಿಗೆ ಭಕ್ತಿ ಪ್ರೀತಿಗಳ ಮಹಾ ಪೂರವೇ ಉಕ್ಕಿ ಬರುತ್ತದೆ "ಸ್ಮರಿಸಿದವರನು ಕಾಯ್ವ ನಮ್ಮ ಸೂರ್ಯಾನೇಕ ಪ್ರಭಾವ, ಸುರಮುನಿಗಳ ಸಂಜೀವ ಶ್ರೀವೆಂಕಟ ನಮ್ಮ ಪೊರವ' ಎಂದು ಗೋವಿಂದನ ಕೃಪೆಯನ್ನು ಹೃತ್ಪೂರ್ವಕ ಸ್ಮರಿಸಿಕೊಳ್ಳುತ್ತಾರೆ ಭೂಷಣಕೆ ಭೂಷಣ ಇದು ಭೂಷಣ ಶೇಷಗಿರಿವಾಸ ಶ್ರೀವೆಂಕಟೇಶನ ಪದಪಲ್ಲವಿಯೂ ಗೋವಿಂದನ ನಾಮಲಹರಿಯ ತರಂಗಗಳು ಹರಡಿಕೊಳ್ಳುತ್ತವೆ ಜಗತ್ ಸುಂದರಕಾಯನಾದಂತಹ ಶ್ರೀಹರಿಗೆ "ರನ್ನ ಗೆಜ್ಜೆಗಳಿರುವ ನಿನ್ನ ಕಟಿಗೆ ಶರಣು ಹೊನ್ನ ಕದಳೀ ಪೋಲ್ವ ತೊಡೆಗಳಿಗೆ ಶರಣು ಪುನ್ನಾಗ ಕರಗತ್ತದ್ವಯ ನಿತಂಬಕೆ ಶರಣು ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು.' ಎಂದು ಶ್ರೀ ಆನಂದತೀರ್ಥರು ದ್ವಾದಶಸ್ತೋತ್ರದಲ್ಲಿ ವರ್ಣಿಸಿರುವಂತೆ ಪರಮಾತ್ಮನ ಪರಮಪ್ರೇಷ್ಠ ಮನೋಹರ ಅಂಗಾಂಗಗಳನ್ನು ಶ್ರೀಪಾದರಾಜರು ಮನಮುಟ್ಟ ವರ್ಣಿಸುತ್ತಾರೆ

ಶ್ರೀಪಾದರಾಜರು ಕೀರ್ತನೆಗಳ ಕಲಾವಿದರು ಸುಳಾದಿಗಳ ಸಂಪ್ರದಾಯ ಪ್ರವರ್ತಕರು, ಉಗಾಭೋಗಗಳ ಉತ್ಕೃಷ್ಟ ದಾರ್ಶನಿಕರು ವೃತ್ತಿ ಶ್ರೇಷ್ಠ ವೃತ್ತನಾಮಭಾಗವತೋತ್ತಮರು ದಂಡಕಗಳ ದಂಡಪಾಣಿಗಳು, ಸಂಗೀತದ ಸಂಪೂರ್ಣ ಪ್ರಭುತ್ವವಿದ್ದ ಶ್ರೀಪಾದರಾಜರು ಸಾಹಿತ್ಯದ ಪಾಂಡಿತ್ಯ, ಭಕ್ತಿಯ ಮಹತ್ವ, ಸರಸ ಕವಿಯ ಪಟುತ್ವಗಳ ಪ್ರತಿಭಾಮೂರ್ತಿಗಳು. ತಮ್ಮ ಕೃತಿಗಳಲ್ಲಿ ಕಥಾಹಂದರವನ್ನು ಆಕರ್ಷಕವಾಗಿ ಬೆಳೆಸುವ ಆತ್ಮೀಯ ಕಲಾತ್ಮಕತೆ ಶ್ರೀಪಾದ ರಾಜರಿಗೆ ಸಹಜವಾಗಿಯೇ ಸಿದ್ಧಿಸಿದೆ

ಶ್ರೀಕೃಷ್ಣನಲ್ಲಿ ಗೋಪಿಯರಿಟ್ಟಿದ್ದ ಪ್ರೀತಿ ಅನುರಾಗಗಳನ್ನೇ ಮೀರಿಸುವ ಭಾವತನ್ಮಯತೆ ಶ್ರೀಪಾದರಾಜರದು ಮೋಹಮದಮಾತ್ಸರ್ಯದ ಘೋರ ಪರಿಣಾಮಗಳನ್ನು ಪ್ರಭಾವಪೂರ್ಣವಾಗಿ ಪ್ರಕಟಿಸುವ ಶ್ರೀಪಾದರಾಜರು ನರಕಾಸುರ, ಕೌರವರ ಚಿತ್ರಗಳ ಮೂಲಕ ಅಹಂಕಾರದ ಪರಿಣಾಮಗಳನ್ನು ಬಯಲಿಗೆಳೆಯುತ್ತಾರೆ

ಶ್ರೀಪಾದರಾಜರು ಲಾಕ್ಷಣಿಕರು ವಾಗ್ಗೇಯಕಾರರು ಶಾಸ್ತ್ರೀಯ ಸಂಗೀತ ವಿನ್ಯಾಸಕಾರರು ಕನ್ನಡದಲ್ಲಿ ನೂತನ ಸಂಸ್ಕೃತಿ ಸಂಪ್ರದಾಯಗಳ ನವ್ಯ ಪರಂಪರೆಯ ಪ್ರವರ್ತಕರು. ಶ್ರೀಪಾದರಾಜರ ತಪೋಬೀಜ ವ್ಯಾಸರಾಜರಲ್ಲಿ ಮೊಳೆತು, ಪುರಂದರದಾಸರಲ್ಲಿ ಪರಿಪೂರ್ಣವಾದವಲ್ಲಿ ಪಲ್ಲವಿಸಿ, ವಾದಿರಾಜರಲ್ಲಿ ವಿದ್ಯಾ ವೈಭವವಾಗಿ, ವಿಜಯದಾಸರಲ್ಲಿ ವಿಶಿಷ್ಟ ಶಾಸ್ತ್ರಪ್ರಮೇಯ ಪರಿಪಾಕಗಳ ಸಮೃದ್ಧಿಯಾಗಿ, ಗೋಪಾಲದಾಸರಲ್ಲಿ ಘನತ ವೈರಾಗ್ಯತ್ಯಾಗಗಳ ವೃಕ್ಷವಾಗಿ, ಜಗನ್ನಾಥದಾಸರಲ್ಲಿ ಜಗದೆತ್ತರ, ಮುಗಿಲೆತ್ತರ ಬೆಳೆದು ಶಾಸ್ತ್ರಸಾಹಿತ್ಯ ಸಂಗೀತಗಳ ಹರಿಕಥಾಮೃತಸಾರದಂತಹ ಮೇರುವೃಕ್ಷವಾಗಿ, ಕಲ್ಪವೃಕ್ಷವಾಗಿ ಪರಿಣಮಿಸಿತು.

ನಮಃ ಶ್ರೀಪಾದರಾಜಾಯ, ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾತೇ ನಮಃ

## ವ್ಯಾಸರಾಜರು

ವ್ಯಾಸಕೂಟ ದಾಸಕೂಟಗಳ ಪ್ರವರ್ತಕ ಪ್ರದೀಪರಾದ ವ್ಯಾಸರಾಜರು ಕರ್ನಾಟಕದ ಇತಿಹಾಸ ಹಾಗೂ ಧಾರ್ಮಿಕ ಪರಂಪರೆಗಳಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದವರು. ಶಕ ೧೪೪೯ ರಲ್ಲಿ ಎಂದರೆ ಕ್ರಿ ಶ ೧೫೨೭ ರಲ್ಲಿ ಕೃಷ್ಣದೇವರಾಯನು ಈ ಧರ್ಮಗುರುಗಳಿಗೆ ಹಾಕಿಕೊಟ್ಟಿರುವ ಗೌರಾಪುರ ಶಾಸನದಲ್ಲಿ

"ನಿಗಮಾಗಮಪಾರೀಣತರು, ನಿಜನರಾಧೀಶ ಮಂತ್ರಿಗಳೂ,
ನೃಪೇಂದ್ರ ಮುಕುಟರತ್ನರೂ, ನಿರಹಂಕಾರಚಿತ್ತರೂ,
ನೀತಿ ಮಾರ್ಗೋಪದೇಶಿಗಳೂ,
ವೇದಾಯುಸರವೇಶರೂ, ಪುರಾಣ ಪುರುಷರೂ, ಧ್ಯಾನಪ್ರಸ್ತುತ್
ಪ್ರತೀಕ ಮೂರ್ತಿಗಳೂ,
ಮಧ್ವಾಚಾರ್ಯಮತಾಂಭೋಜರೂ, ಮಾರ್ತಾಂಡತೇಜಸರೂ,
ಬ್ರಹ್ಮಣ್ಯತೀರ್ಥಶಿಷ್ಯರೂ,

ತುಂಬ ಸ್ಥಾಪಿಸಿದರು ಹರಿದ್ವಾರದಲ್ಲಿ ಸತ್ಯಸಾಧರನ್ನೂ, ಕಾಶಿಯಲ್ಲಿ ಜಯದೇವನನ್ನು, ಬಂಗಾಲದಲ್ಲಿ ಈಶ್ವರ ಸೂರಿಯನ್ನು, ಗಯಾದಲ್ಲಿ ಹರಿಮಿಶ್ರರನ್ನೂ, ಕುಂಭಕೋಣದಲ್ಲಿ ವಿಜಯೀಂದ್ರರನ್ನೂ ಉಡುಪಿಯಲ್ಲಿ ವಾದಿರಾಜರನ್ನೂ, ಮುಳಬಾಗಿಲಿನಲ್ಲಿ ಪ್ರಜ್ಞಾನಿಧಿಗಳನ್ನೂ, ಕಂಚಿಯಲ್ಲಿ ಶ್ರೀನಿವಾಸತೀರ್ಥರನ್ನು ಉಪಕುಲಪತಿಗಳನ್ನಾಗಿ ನಿಯಮಿಸಿ, ಭಾರತದಲ್ಲಿ ಇಂಥ ವ್ಯಾಪಕ ವಿಶ್ವವಿದ್ಯಾಲಯದ ಪ್ರಪ್ರಥಮ ಕುಲಪತಿಗಳಾಗಿ ವ್ಯಾಸರಾಜರು ವಿದ್ಯೆಯ ಸಮಗ್ರ ಕ್ರಾಂತಿಯನ್ನೇ ಮಾಡಿದರು ।

ವ್ಯಾಸರಾಜರ ಶಿಷ್ಯವರ್ಗದಲ್ಲಿ ಪುರಂದರದಾಸರು ಕನಕದಾಸರು ವೈಕುಂಠದಾಸರು ವಾದಿರಾಜರು. ಪುರಂದರದಾಸರ ಮಕ್ಕಳಾದ ಲಕ್ಷ್ಮಣದಾಸ ಹೇಮಣದಾಸ ಹಾಗೂ ಮಧ್ವಪತಿದಾಸರುಗಳಿದ್ದು ದಾಸಕೂಟ ಸಂಘಟಿತವಾಗಿತ್ತು. ಪುರಂದರದಾಸರ ಮಕ್ಕಳಿಗೆ ವ್ಯಾಸರಾಜರು ನೀಡಿದ ವೃತ್ತಿಗಳ ಶಾಸನವೇ ಅಧಿಕೃತವಾದ ಪುರಂದರದಾಸರ ಬಗೆಗೆ ದೊರಕುವ ಪ್ರಪ್ರಥಮ ದಾಖಲೆ. ಕಮಲಾಪುರದ ಈ ತಾಮ್ರಶಾಸನ ಪಾಂಡುರಂಗದೇಸಾಯಿಯವರಿಂದ ಸಂಶೋಧಿತವಾಗಿದ್ದು ಈ ಶಾಸನದ ಪಾಠ ಎಪಿಗ್ರಾಫಿಕ ಇಂಡಿಕದಲ್ಲಿ, ಸಂಪುಟ ೨೧. ಪುಟ [illegible]ರಲ್ಲಿ ಪ್ರಕಟವಾಗಿದೆ

ಈ ಶಾಸನದ ಪಾಠ ಹೀಗಿದೆ

"ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀ ಪುರಂದರ ದಾಸಜಃ
ವಸಿಷ್ಠ ಗೋತ್ರಜೋ ವೃತ್ತಿದ್ವಯ ಮುತ್ತ್ರೈತಿಯಾಜುಷಃ
ವಸಿಷ್ಠಾನ್ವಯಿ ಸಂಜಾತಃ ಶ್ರೀಪುರಂದರ ದಾಸಜಃ
ದ್ವಿಜೋ ಹೇಮಣದಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ।
ವಸಿಷ್ಠಗೋತ್ರ ಸಂಭೂತೋ ಶ್ರೀ ಪುರಂದರ ದಾಸಜಃ ।
ಧೀಮಾನ್ ಮಧ್ವಪದಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ।

ಈ ಶಾಸನ ಹಾಕಿಕೊಟ್ಟಿದ್ದು ಶಾಲಿವಾಹನ ಶಕ ೧೪೪೭ ಪಾರ್ಥಿವ

ಸಂವತ್ಸರ ಫಾಲ್ಗುಣ ಶುದ್ಧ ದ್ವಾದಶಿ ಎಂದರೆ ೧೫೩೭ ಮಾರ್ಚಿ ೨೪ ರಂದು. ಪುರಂದರರ ಜೀವಿತಕಾಲದಲ್ಲೇ ಅವರ ಮಕ್ಕಳೂ ದಾಸರಾಗಿದ್ದರೆಂಬುದನ್ನು ಈ ಶಾಸನ ಸೂಚಿಸುತ್ತದೆ. ಕೃಷ್ಣದೇವರಾಯನು ಹಂಪಿಯ ವಿಠಲ ದೇವಾಲಯದ ದಿವ್ಯಸನ್ನಿಧಿಯಲ್ಲಿ ರಾಜಗುರುಗಳಾಗಿದ್ದ ವ್ಯಾಸರಾಯರಿಗೆ 'ವ್ಯಾಸಸಮುದ್ರ' ಎಂಬ ನಾಮಾಂಕಿತ ಬೆಟ್ಟಕೊಂಡ ಗ್ರಾಮವನ್ನು ಸರ್ವಮಾನ್ಯ ಏಕಭೋಗ್ಯವೃತ್ತಿಯಾಗಿ ನೀಡಿದಾಗ, ವ್ಯಾಸರಾಜರು ಅದನ್ನು ೨೦೮ ಜನ ವಿದ್ವಾಂಸರಿಗೆ ವೃತ್ತಿಗಳನ್ನಾಗಿ ಹಂಚಿದಾಗ ದಾಸರ ಈ ಮೂವರು ಮಕ್ಕಳಿಗೂ ನೀಡಿರುವ ಬಗ್ಗೆಯೂ ಈ ಶಾಸನ ದಾಸರ ಮೂವರೂ ವಿದ್ವಾಂಸರು, ವಸಿಷ್ಠಗೋತ್ರದ ಯಜುಶ್ಶಾಖೆಯವರು ಎಂದೂ ನಿರ್ದೇಶಿಸುತ್ತದೆ

ಕೃಷ್ಣದೇವರಾಯನಿಗೆ ಪೂರ್ವದಲ್ಲಿಯೇ ಸಾಳ್ವನರಸಿಂಹನು ಶ್ರೀಪಾದರಾಜರಲ್ಲಿಗೆ ಬಂದು ಚಂದ್ರಗಿರಿಗೆ ರಾಜಗುರುವಾಗಿ ತಿರುಪತಿ ದೇವಸ್ಥಾನದ ಕೈಂಕರ್ಯಕ್ಕಾಗಿ ಬರಬೇಕೆಂದು ಆಹ್ವಾನಿಸುತ್ತಾನೆ. ಶ್ರೀಪಾದರಾಜರು ಆ ಕಾರ್ಯಕ್ಕೆ ಶ್ರೀ ವ್ಯಾಸರಾಜರನ್ನು ನಿಯೋಗಿಸಿ ಅವರನ್ನು ಆಶೀರ್ವದಿಸುತ್ತಾ

'ಇಡೀ ಜಗತ್ತಿನಲ್ಲಿ ಪ್ರಖ್ಯಾತವಾದ ಅಖಂಡವಿದ್ಯಾವೈಭವವು ಶಾರದೆಯಲ್ಲಿಯೂ. ಪ್ರತಿಭಟರನ್ನು ತತ್ತರಗೊಳಿಸುವ ಪ್ರಬಲಪರಾಕ್ರಮವು ಭಾರ್ಗವನಲ್ಲಿಯೂ, ಅಪ್ರತಿಹತವಾದ ಬುದ್ಧಿಕುಶಲತೆಯು ಬೃಹಸ್ಪತ್ಯಾಚಾರ್ಯರಲ್ಲಿಯೂ, ಅತ್ಯುರ್ಜಿತ ತೇಜಸ್ಸನ್ನು ಸೂರ್ಯನಲ್ಲಿಯೂ, ಆನಂದದ ಆಹ್ಲಾದವನ್ನು ಚಂದ್ರನಲ್ಲಿ ಪಾವಿತ್ರ್ಯವನ್ನು ಯಜ್ಞಪುರುಷನಲ್ಲಿಯೂ, ಧೈರ್ಯವನ್ನು ಪರ್ವತರಾಜನಲ್ಲಿಯೂ ಅನನ್ಯ ದಾತೃತ್ವವು ಕಲ್ಪವೃಕ್ಷದಲ್ಲಿಯೂ, ಅಚಿಂತ್ಯಾದ್ಭುತ ಶಕ್ತಿಯು ಜಗದಂತನಾದ ವಾಸುದೇವನಲ್ಲಿಯೂ ಇದೆ. ಇವೆಲ್ಲ ಸಮುಚ್ಚಯಗೊಂಡಂತೆ ಕಾಣುವ ವ್ಯಕ್ತಿತ್ವವುಳ್ಳ ನೀವು ಮಹತ್ಕಾರ್ಯ ಸಾಧನೆಗಾಗಿ ಲೋಕೋದ್ಧಾರಾರ್ಥವಾಗಿಯೇ ಅವತರಿಸಿದ್ದೀರಿ ನಿಮ್ಮಿಂದ ಜಗತ್ಕಲ್ಯಾಣವಾಗಲಿ' ಎಂದು ಹರಸಿ ಬೀಳ್ಕೊಟ್ಟರು

ವ್ಯಾಸರಾಜರು ಹಾಗೂ ಸಾಳ್ವನರಸಿಂಹ, ಅವನ ಮಗ ತಿಮ್ಮರಾಯನ ಜೊತೆ ಇದ್ದ ಗುರು ಶಿಷ್ಯ ಸಂಬಂಧವನ್ನು ವ್ಯಾಸಯೋಗಿ ಚರಿತ್ರೆ ಗ್ರಂಥವು

ಬೃಹಸ್ಪತಿ ಹಾಗೂ ಇಂದ್ರರಿಗೆ ಹೋಲಿಸುತ್ತದೆ ತಿರುಪತಿ ಬೆಟ್ಟದ ಮೇಲಿರುವ ವ್ಯಾಸರಾಜಪುರದ ಶಾಸನ[1] ಇವರನ್ನು 'ನರಸಿಂಹ ಮಹಾರಾಯ' ಎಂದೇ ಬಣ್ಣಿಸುತ್ತದೆ ಈ ಶಾಸನವು ತಿರುಮಲೆಯ ದೇವಾಲಯದ ಅಮೂಲ್ಯ ಆಭರಣಗಳ ಕಳವಿಗೆ ಸಂಬಂಧಪಟ್ಟ ಪ್ರಕರಣಗಳನ್ನು ತಿಳಿಸುತ್ತಾ, ಕಡೆಗೆ ಶ್ರೀವ್ಯಾಸರಾಜರು ಹನ್ನೆರಡು ವರ್ಷಗಳ ಕಾಲ ತಿರುಮಲೆಸ್ವಾಮಿ ಶ್ರೀನಿವಾಸನನ್ನು ಪೂಜಿಸಲು ಪರಮಗೌರವಾದರಗಳೊಡನೆ ನಿಯೋಜಿತರಾಗುತ್ತಾರೆ ಎಂಬುದನ್ನು ಸೂಚಿಸುತ್ತದೆ

ಕ್ರಿ ಶ ೧೪೪೭ರಲ್ಲಿ ಜನಿಸಿದ ಶ್ರೀ ವ್ಯಾಸರಾಜರು ಇಪ್ಪತ್ತು ವರ್ಷಗಳ ಅಧ್ಯಯನ, ತಪಸ್ಸುಗಳ ನಂತರ ೧೪೭೮ರಲ್ಲಿ ಸ್ವತಂತ್ರವಾದ ದಿಗ್ವಿಜಯಯಾತ್ರೆಯನ್ನು ಪ್ರಾರಂಭಿಸಿದರು ೧೪೮೬ರಲ್ಲಿ ಸಂಚಾರ ಮುಗಿಸಿ ಕಂಚಿಗೆ ಹಿಂತಿರುಗಿದಾಗ ತೇಜಸ್ವೀ ತರುಣಸನ್ಯಾಸಿಗಳಾಗಿ ಕಂಗೊಳಿಸುತ್ತಿದ್ದರು ೧೪೭೫ರಲ್ಲಿ ಮುಳಬಾಗಿಲಿಗೆ ಬಂದಾಗ 'ನ್ಯಾಯಾದೇವಿ ತನ್ನ ಪ್ರಿಯಕರನಿಗಾಗಿ ತಪಿಸುತ್ತಿದ್ದ'[2] ಅಗ್ನಿಯಂತೆ ದೇದೀಪ್ಯಮಾನವಾಗಿದ್ದರು

ಆ ಸಂದರ್ಭಗಳಲ್ಲೇ ಅದರಲ್ಲೂ ಅನಂತರ ಮಾಧ್ವಸಂಪ್ರದಾಯದ ಅನೇಕ ಯತಿಗಳು ಖ್ಯಾತರಾಗಿದ್ದರು ಉತ್ತರಾದಿ ಮಠದ ಯತಿವರೇಣ್ಯರಾದ ಶ್ರೀ ರಘುನಾಥತೀರ್ಥರು ದುಂದುಭಿನಾಮ ಸಂವತ್ಸರ ಎಂದರೆ ಕ್ರಿ.ಶ ೧೫೦೨ರಲ್ಲಿ ಬೃಂದಾವನಸ್ಥರಾದರು ಕ್ರಿ ಶ. ೧೪೯೦ರಲ್ಲಿ ರಾಯರ ಮಠದ ಜಿತಾಮಿತ್ರ ತೀರ್ಥರು ಕೃಷ್ಣಾನದಿಯ ದಂಡೆಯ ಮೇಲಿನ ಕೂಡ್ಲೂರಿನ ಬಳಿ ಬೃಂದಾವನಸ್ಥರಾದರು ಅವರ ನಂತರ ಬಂದ ಶ್ರೀ ರಘುನಂದನತೀರ್ಥರು ವಿಜಯನಗರಕ್ಕೆ ಬಂದು ಅಲ್ಲಿ ಕ್ರಿ ಶ ೧೫೩೩ರಲ್ಲಿ ಬೃಂದಾವನಸ್ಥರಾದರು ಅವರ ಶಿಷ್ಯ ಸುರೇಂದ್ರತೀರ್ಥರು ವ್ಯಾಸರಾಜರ ಪರಮಾಪ್ತ ಯತಿಗಳು. ತಮ್ಮ ಆತ್ಮೀಯ ಶಿಷ್ಯ ಪ್ರತಿಭಾಪುಂಜ ಶ್ರೀವಿಜಯೀಂದ್ರರನ್ನು ವ್ಯಾಸರಾಜರು ಆನಂದದಿಂದ ಶ್ರೀ ಸುರೇಂದ್ರತೀರ್ಥರಿಗೆ ಧಾರಾಪೂರ್ವಕಕೊಟ್ಟು ರಾಯರ ಮಠದ ಯತಿಗಳನ್ನಾಗಿ ಮಾಡಿದರು

---

1 ಶಾಸನ ಸಂಖ್ಯೆ ೭೦ ಮದ್ರಾಸ್ ಎಪಿಗ್ರಾಫಿಯಾ ಸಂಗ್ರಹ ೧೮೮೯

3, ವ್ಯಾಸಯೋಗಿ ಚರಿತಂ—ಸೋಮನಾಥಕವಿ

ಅನಂತರ ಬಂದ ಯತಿತ್ರಯರ ಬದುಕು ಹಾಗೂ ಬೃಂದಾವನಗಳಲ್ಲಿ ವಿಜಯನಗರದ ಇತಿಹಾಸದ ಗತಿಯನ್ನು ಪ್ರತಿಬಿಂಬಿಸಿದ್ದವು ವ್ಯಾಸರಾಯರ ಬಳಿಕ ಶ್ರೀನಿವಾಸತೀರ್ಥರು ಹಾಗೂ ಶ್ರೀರಾಮತೀರ್ಥರು ನವವೃಂದಾವನದಲ್ಲಿ ವೃಂದಾವನಸ್ಥರಾದರು ವಿಜಯನಗರಪತನಾನಂತರ ರಾಜಧಾನಿ ಪೆನುಗೊಂಡೆಗೆ ವರ್ಗವಾದಾಗ ಆಗಿನ ಶ್ರೀಲಕ್ಷ್ಮೀಕಾಂತತೀರ್ಥರ ಬೃಂದಾವನವು ಪೆನುಗೊಂಡೆ ಯಲ್ಲಿಯೇ ಆಯಿತು ಅಲ್ಲಿಯೂ ಸಾಮ್ರಾಜ್ಯಪತನವಾಗಿ ವೆಲ್ಲೂರು ರಾಜಧಾನಿಯಾದಾಗ ಶ್ರೀಶ್ರೀಪತಿತೀರ್ಥರು ಹಾಗೂ ಅವರ ಶಿಷ್ಯ ಶ್ರೀರಾಮಚಂದ್ರ ತೀರ್ಥರ ಬೃಂದಾವನ ಅಲ್ಲಾಯಿತು ಅತಿದುಃಖದ ಅವಶೇಷ ಮಾತ್ರವಾಗಿದ್ದ ವಿಜಯನಗರದ ಕಟ್ಟ ಕಡೆಯ ರಾಜಧಾನಿಯಾಗಿದ್ದ, ಹಸನ್ನೂರಿನ ವೇಲೂರಿನ ಬಳಿಯ ವಲ್ಲಿ ಮಿಟ್ಟ ಸಮುದ್ರದಲ್ಲಿ ಮುಂದೆ ಬಂದ ಶ್ರೀ ಲಕ್ಷ್ಮೀ ವಲ್ಲಭತೀರ್ಥರ ಬೃಂದಾವನವಾಯಿತು

ವ್ಯಾಸರಾಜರ ಬಗ್ಗೆ ದೊರಕಿರುವ ಶಾಸನಗಳಲ್ಲಿ ತೀರಾ ಹಳೆಯದೆಂದರೆ ಮದರಾಸ್ ಎಪಿಗ್ರಾಫಿಕಾ ಸಂಗ್ರಹದ ೧೯೧೯ರ ೩೭೦ನೇ ಸಂಖ್ಯೆಯದು [1] ಈ ಶಾಸನವನ್ನು ಕ್ರಿ ಶ ೧೫೧೧ರ ಆಗಸ್ಟ್‌ನಲ್ಲಿ ಹಾಕಿಸಲಾಗಿದೆ ಮದರಾಸಿನ ಶಾಸನ ತಜ್ಞರೊಬ್ಬರು ಈ ಶಾಸನದ ಬಗ್ಗೆ ಹೇಳುತ್ತಾ 'ಮಾನ್ಯಗುರುಗಳಾದ ಪರಮಹಂಸ ಪರಿವ್ರಾಜಕಾಚಾರ್ಯ ವ್ಯಾಸತೀರ್ಥರು ಶ್ರೀ ಬ್ರಹ್ಮಣ್ಯತೀರ್ಥರ ಶಿಷ್ಯೋತ್ತಮರಾಗಿದ್ದು ಪಡೈವೀಡು ರಾಜ್ಯದ ಪೊಲಂಬಾಕ್ಕಮ್ ಎಂಬ ಗ್ರಾಮವನ್ನು ದಾನವಾಗಿ ರಾಜನಿಂದ ಪಡೆದು, ವರದರಾಜಸ್ವಾಮಿಯ ಆವಣಿ ಉತ್ಸವವನ್ನು ನಡೆಸುವ ಅಧಿಕಾರವನ್ನೂ ಪಡೆದರು' ಎಂಬ ವಿವರಗಳನ್ನು ನೀಡಿದ್ದಾರೆ

ಇನ್ನೊಂದು ಶಾಸನ ೧೫೧೩ರದ್ದು [2] ಕಂಚಿಯ ವರದ ದೇವಾಲಯದ ಮುಂದಿನ ಎಡಗೋಡೆಯಲ್ಲಿರುವ ಈ ಶಾಸನ "ವಿನಿಯೋಗ ನಾನಾವರ್ಗದ ಸ್ವೈಷಢ್ಯ ಸಹ ಗುರುಮ್ಮಗಳು ವ್ಯಾಸರಾಯರಿಗೆ ಹಾಲುಣಿ ಎಂದಿದೆ"

---

1 MADRAS Epigraphica 1919 No 370

2 Archeological Report of 1889 Report No 48-Inscription No 277 South Indian Inscription 192- IV Volume

೧೫೧೫ರ ಭಾವಸಂವತ್ಸರದ ಫಾಲ್ಗುಣ ಶುಕ್ಲ ಶುಕ್ರವಾರದಂದು ಹಾಕಿದ ಇನ್ನೊಂದು ಶಾಸನ[1] ಉದಯಗಿರಿಯಿಂದ ಕೃಷ್ಣದೇವರಾಯ ಶ್ರೀಕೃಷ್ಣನನ್ನು ವಿಜಯನಗರಕ್ಕೆ ತಂದು ಪ್ರತಿಷ್ಠಾಪಿಸಿದ ವಿಷಯ ತಿಳಿಸುತ್ತದೆ ಮುಳಬಾಗಿಲಿನ ರಾಮಣ್ಣಾಚಾರ್ಯ ಹಾಗೂ ತಿಮ್ಮಣ್ಣಾಚಾರ್ಯ ಎಂಬುವರು ಇದರ ಅರ್ಚಕರಾದ ವಿಷಯವನ್ನು ಇದು ಹೇಳುತ್ತದೆ ಇದರ ಮುಂದಿನ ಶಾಸನ[2] ಇದೇ ವಿಷಯವನ್ನು ಮುಂದುವರಿಸುತ್ತಾ ಹನ್ನೆರಡು ಜನ ಬ್ರಾಹ್ಮಣರನ್ನು ಈ ದೇವಾಲಯದಲ್ಲಿ ನವಮಾಸಾಭಿಷೇಕದ ಕೈಂಕರ್ಯಕ್ಕೆಂದೇ ವ್ಯವಸ್ಥೆ ಮಾಡಲಾಯಿತು ಎನ್ನುತ್ತದೆ. ಉದಯಗಿರಿಯಿಂದ ಕೃಷ್ಣ ವಿಜಯನಗರಕ್ಕೆ ಬಂದ ಈ ಸಂಭ್ರಮ ಸಂದರ್ಭದಲ್ಲೀ ವ್ಯಾಸರಾಜರು ತಮ್ಮ ಸುಪ್ರಸಿದ್ಧ ಕೃತಿಯಾದ

"ಧರೆಗಧಿಪನೆಂದೆನಿಪ ವಿದ್ಯಾನಗರ ಒಳಿತೆಂದು ಉದಯ
ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಮ್ಮ" ಎಂಬುದನ್ನು

ರಚಿಸಿದ್ದಾರೆ

೧೫೩೪ರಲ್ಲಿ ತಿರುಪತಿ ಶ್ರೀನಿವಾಸದೇವರ ಗುಡಿಯ ಸ್ಥಾನತ್ತಾರರು ಶ್ರೀ ವ್ಯಾಸರಾಯರಿಗೆ ಹಾಕಿಸಿಕೊಟ್ಟ ವೆಂಕಟೇಶ್ವರನ ಗುಡಿಯ ವಿಶೇಷ ಸ್ಥಾನದ ಶಾಸನವೊಂದು ಅವರನ್ನು "ಶ್ರೀಮತ್ ಪರಮ ಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣಜ್ಞ ದುರ್ವಾದಿ ಗರ್ವಸರ್ವಸ್ವಾಪಹಾರ, ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಸಕಲ ವಿದ್ವಜ್ಜನ ಮನ-ಪದ್ಮವನ ನೌಷಸ್ತಿಕ, ಶ್ರೀಮತ್ ವ್ಯಾಸತೀರ್ಥ ಶ್ರೀಪಾದ ಒಡೆಯರು ಎಂದು ತುಂಬು ಗೌರವದಿಂದ ಪ್ರಶಂಸಿಸುತ್ತದೆ

ಕೃಷ್ಣದೇವರಾಯನು ವ್ಯಾಸತೀರ್ಥರು ತಮ್ಮ ಮಠ ಸ್ಥಾಪಿಸಿಕೊಳ್ಳುವ ಸಲುವಾಗಿ ತಿರುಪತಿ ಬೆಟ್ಟದ ಮೇಲೂ, ತಿರುಪತಿ ಊರಿನಲ್ಲೂ ಮನೆಗಳನ್ನು ದಾನವಾಗಿ ಕೊಟ್ಟಿರುವ ಅನೇಕ ಶಾಸನಗಳಿವೆ ನಾಳ್ವ ನರಸಿಂಹನು ಚಂದ್ರಗಿರಿಯಲ್ಲಿ ಆಳುತ್ತಿದ್ದಾಗ, ತಿರುಪತಿ ಗುಡಿಯ ಅರ್ಚಕರಲ್ಲಿ ಒಬ್ಬನಾದ ಸಂಬಿ

1 South Indian Inscriptions volume IV No 254
2 South Indian Inscriptions volume IV No. 255

ವಿಠಪ್ಪಯ್ಯನ್ ಎಂಬುವನು ದೇವರ ಆಭರಣಗಳನ್ನು ಕದ್ದಾಗ ಅರಸು ಬೆಟ್ಟದ ಮೇಲೂ ಕೆಳ ತಿರುಪತಿಯಲ್ಲಿ ಅವನಿಗೆ ಇದ್ದ ಮನೆಗಳನ್ನು ತೆಗೆದುಕೊಂಡಿದ್ದನು. ಬೆಟ್ಟದ ಮೇಲೆ ಗುಡಿಯ ಎದುರಿನ ಕೊಳಕ್ಕೆ, ಉತ್ತರದಲ್ಲಿ ನಂಬಿ ಚಕ್ರಾಯುಧಭಟ್ಟರ ಮತ್ತು ಚಕ್ರವರ್ತಿ ಅಣ್ಣಯ್ಯಂಗಾರ್ ಮನೆಗಳ ಸಮೀಪ ಇದ್ದ ಆವನ ಮನೆಯನ್ನು ಮುಂದೆ ಕೃಷ್ಣದೇವರಾಯನ ಕಾಲದಲ್ಲಿ, ಸ್ವತಃ ರಾಜನೇ ಧಾರಾಪೂರ್ವಕ ವ್ಯಾಸರಾಜರಿಗೆ ನೀಡಿ ಅಲ್ಲಿ ಅವರು ಮಠ ಕಟ್ಟಿಸಿಕೊಳ್ಳಲು ಶಾಸನವನ್ನು ಹಾಕಿಕೊಟ್ಟನು. ಇಷ್ಟೇ ಅಲ್ಲದೆ ಕ್ರಿ. ಶ. ೧೫೨೩ರ ಜನವರಿ ೧೨ರಂದು ಕೃಷ್ಣದೇವರಾಯನು ಇನ್ನೊಂದು ಶಾಸನ ಹಾಕಿಸಿ ಮಠದ ಧರ್ಮಕ್ಕೆಂದು ತನ್ನ ಹೆಸರಿನಲ್ಲಿ ಶ್ರೀನಿವಾಸ ದೇವರಿಗೆ ಸಲ್ಲುವ ನೈವೇದ್ಯ ಪ್ರಸಾದದ ಒಂದು ಪಾಲನ್ನು ವ್ಯಾಸರಾಜರ ಮಠಕ್ಕೆ ನೀಡಬೇಕೆಂದು ಘೋಷಿಸುತ್ತಾನೆ.

ಹೀಗೆಯೇ ಬೆಟ್ಟದ ಕೆಳಗಿನ ಗೋವಿಂದರಾಜ ಪಟ್ಟಣದಲ್ಲೂ ಗೋವಿಂದರಾಜನ ಗುಡಿಗೆ ಉತ್ತರದಲ್ಲಿಯ ಮಾಢಬೀದಿಯಲ್ಲಿಯ ಪೊಟ್ಟುಭಟ್ಟರ್ ಪನ್ನಗಿರಿನಾದರ್ ಮತ್ತು ಅರ್ಚಕರಾದ ಮಚ್ಚಿಶ್ರೀನಿವಾಸ್ ಭಟ್ಟರ್ ಅಣ್ಣಾನ್ ಇವರುಗಳ ಮನೆಯ ಸಮೀಪ ಇದ್ದ ಅದೇ ನಂಬಿ ವಿಠಪ್ಪಯ್ಯನ ಮನೆಯನ್ನೂ, ಅರಸನು ಧಾರಾಪೂರ್ವಕ ವ್ಯಾಸರಾಜರಿಗೆ ಧಾರೆ ಎರೆದು ಕೊಟ್ಟ ಶಾಸನವೂ ಇದೆ. ಪಾಪನಾಶಿನಿಗೆ ಹೋಗುವ ದಾರಿಯಲ್ಲಿ ವ್ಯಾಸರಾಜರಿಗೆ ತಂಗಲು ಒಂದು ವಸತಿ ಮನೆಯನ್ನೂ ಕೊಟ್ಟ ಉಲ್ಲೇಖವಿದೆ. ಅಲ್ಲದೆ ವ್ಯಾಸರಾಯರಿಗೆ 'ಪರಟ್ಟಾತಿ ತಿರುನಾಳಿನ ಮಾರಾಯ' ಎಂಬ ನೈವೇದ್ಯದಲ್ಲಿ ಒಂದು ಭಾಗವನ್ನು ಕೊಡಬೇಕೆಂದು ಉಲ್ಲೇಖಿಸಲಾಗಿದೆ [1]

ವ್ಯಾಸರಾಜರು ತಿರುಮಲೆ ಬೆಟ್ಟದ ವೆಂಕಟೇಶ್ವರನ ಗುಡಿಯ ಭಂಡಾರಕ್ಕೆ ೧೫೦೦೦ ವರಹಗಳನ್ನು ಕೊಟ್ಟು ಪ್ರತಿವರ್ಷವೂ ವಿಶೇಷ ದಿನಗಳಲ್ಲಿ ದೇವರಿಗೆ ಅಪ್ಪ-ವಡೆಗಳನ್ನು ಅರ್ಪಿಸುವ ವ್ಯವಸ್ಥೆ ಮಾಡಿದರು. ಇಷ್ಟೇ ಅಲ್ಲದ ವಶ್ವೈನಾಡು ಸೀಮೆಯಲ್ಲಿ ತಾವು ಪಡೆದಿದ್ದ ಒಂದಾಲವಾಂಡೂರು ಎಂಬ ಗ್ರಾಮ

---

1 ಶ್ರೀ ಕ್ಷೇತ್ರ ತಿರುಪತಿ, ಎಮ್. ರಾಮಾನುಜಾಚಾರ್ಯ,

ವನ್ನು ತಿರುಪತಿಯ ಗೋವಿಂದರಾಜನಿಗೆ ದಿನವೂ ಕೆಲವು ಸೇವೆಗಳನ್ನು ಮಾಡಿಸುವ ಸಲುವಾಗಿ ಬಿಟ್ಟುಕೊಟ್ಟರು. ೧೫೧೪ರಲ್ಲಿ ಗಜಪತಿಯನ್ನು ಕೃಷ್ಣದೇವರಾಯನು ಜಯಿಸಿ, ಉದಯಗಿರಿ ದುರ್ಗವನ್ನು ಕೈವಶ ಮಾಡಿಕೊಂಡು ರಾಜಧಾನಿಗೆ ಹಿಂತಿರುಗುವಾಗ ಮೂವತ್ತು ಸಹಸ್ರ ಬಂಗಾರದ ನಾಣ್ಯಗಳಿಂದ ಕನಕಾಭಿಷೇಕ ಮಾಡಿದ ಶಾಸನವಿದೆ. ರಾಯನು ವಿಜಯನಗರಕ್ಕೆ ಹಿಂತಿರುಗಿ ಮೂವನೆಯ ವಿರೂಪಾಕ್ಷ ದೇವರ ದಿವ್ಯ ಸನ್ನಿಧಿಯಲ್ಲಿ ವ್ಯಾಸರಾಯರಿಗೆ ಅನೇಕ ಮಹತ್ವಪೂರ್ಣವಾದ ದಾನಗಳನ್ನು ನೀಡಿರುವ ಶಾಸನಗಳಿವೆ.

ರಾಯಚೂರು ಕದನದಲ್ಲಿ ಜಯಶಾಲಿಯಾಗಿ ಬಂದ ಕೃಷ್ಣದೇವರಾಯನು ೧೫೨೧ರಲ್ಲಿ ಫೆಬ್ರವರಿ ೧೮ ರಂದು ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಯ ದಿವ್ಯ ಸನ್ನಿಧಾನದಲ್ಲಿ ಎರಡು ತಾಮ್ರ ಶಾಸನಗಳ ಮೂಲಕ ಅನೇಕ ಹಳ್ಳಿಗಳನ್ನು ವ್ಯಾಸರಾಯರಿಗೆ ಧಾರಾಪೂರ್ವಕ ಎರೆದುಕೊಟ್ಟನು. ಸ್ವಭಾನು ಸಂವತ್ಸರದ ದ್ವಾದಶಿ ದಿನದಂದು ಶ್ರೀ ಕೃಷ್ಣದೇವರಾಯನು ಶ್ರೀ ವ್ಯಾಸರಾಯರಿಗೆ ಕುಹಯೋಗ ಪರಿಹಾರ ಮಾಡಿದ ಸಂದರ್ಭದಲ್ಲಿ ಬ್ರಹ್ಮಣ್ಯಪುರವನ್ನು ದಾನ ಮಾಡಿದನು.

ಶ್ರೀ ವ್ಯಾಸರಾಜರು ಎಂದಿನಂತೆ ಪ್ರಾತಃ ಕಾಲದಲ್ಲಿ ಶಾಸ್ತ್ರ ಪಾಠವನ್ನು ಮಾಡುತ್ತಿದ್ದಾಗ ದ್ವಾರಪಾಲಕನು ಬಂದು ನಮಿಸಿ.

'ದ್ವಾರಿ ಕೃಷ್ಣಪತಿ ಸ್ಸಮೇತ್ಯ ನ-ಸ್ವಾಮಿನಃ ಸಹಪುರೋಹಿತಾದಿಭಿ-
ದರ್ಶನಾಪನರ ವೀಕ್ಷತೇ ಘನಾ ಪಾಕಶಾಸನ ಇವಾಬ್ಜಜನ್ಮನಂ[1]

ಮಹಾಸ್ವಾಮಿ, ಕೃಷ್ಣದೇವರಾಯ ಪ್ರಭುಗಳು ಸಕಲ ಪುರೋಹಿತರಿಂದೊಡಗೂಡಿ ದೇವೇಂದ್ರನು ಚತುರ್ಮುಖ ಬ್ರಹ್ಮದೇವರ ದರ್ಶನಾ ಕಾಂಕ್ಷಿಯಾಗಿ ನಿಂತಂತೆ ಬಂದು ತಮಗಾಗಿ ಕಾದಿದ್ದಾರೆ, ಎನ್ನುತ್ತಿದ್ದದ್ದು ವ್ಯಾಸರಾಜರಲ್ಲಿ ಕೃಷ್ಣ ರಾಯನಿಗಿದ್ದ ಗೌರವವನ್ನು ಚಿತ್ರಿಸುತ್ತದೆ.

---

1 ಶ್ರೀ ವ್ಯಾಸಯೋಗಿ ಚರಿತ—ಸೋಮನಾಥ ಕವಿ ಪು : 69.

"ವ್ಯಾಸಕೂಟದ ಅಧ್ವರ್ಯುವಾಗಿದ್ದ ಶ್ರೀ ವ್ಯಾಸರಾಜರ ಕಾಲವು ದ್ವೈತ ದರ್ಶನದ ಒಂದು ದೊಡ್ಡ ಸುವರ್ಣ ಯುಗ ಅವರಿಂದ ಹಿಂದೆಯಾಗಲೀ ಮುಂದೆಯಾಗಲೀ ಸರ್ವತೋಮುಖ ಅಭಿವೃದ್ಧಿಯಲ್ಲಿ ಅವನ್ನು ಸರಿಗಟ್ಟುವ ಕಾಲ ಇನ್ನೊಂದು ಬಂದಿಲ್ಲ.[1] ಪ್ರಗತಿಪರ ವಿಚಾರವಾದಿಗಳಾದ ವ್ಯಾಸತೀರ್ಥರು ಸಮಕಾಲೀನ ದರ್ಶನದ ಬೃಹತ್ ಗ್ರಂಥರಾಶಿಗಳನ್ನು ಅಧ್ಯಯನ ಮಾಡಿದವರು ಬೌದ್ಧ ಧಿಕ್ಕಾರ, ನ್ಯಾಯ ಕುಸುಮಾಂಜಲಿ, ಸುರೇಶ್ವರ ವಾರ್ತಿಕ, ಕುಮಾರಿಲನ ಶ್ಲೋಕ ವಾರ್ತಿಕ, ಚಿತ್ಸುಖರ ಖಂಡನ ಖಂಡ ಖಾದ್ಯ ಮಹಾಭಾಷ್ಯ ಕೈಯಟ, ನ್ಯಾಸ, ರಾಮಾನುಜ ಮುಂತಾದ ಪ್ರಮುಖ ಸಂಪ್ರದಾಯದ ಗ್ರಂಥಗಳಿಂದ ಹೆಚ್ಚು ಹೆಚ್ಚಿಗೂ ಆಕರಗಳನ್ನೊದಗಿ ಸುತ್ತಾ ತಮ್ಮ ವಿಮರ್ಶಾತ್ಮಕ ತಳಹದಿಯನ್ನು ದೃಢವಾಗಿ ಮಾಡಿದರು

ಭಾರತೀಯ ತತ್ವಜ್ಞಾನದ ಪ್ರಸಿದ್ಧಿ ಪಡೆದುಕೊಂಡಿರುವ ಡಾ॥ ಸುರೇಂದ್ರ ನಾಥದಾಸಗುಪ್ತರವರು ತಮ್ಮ ಭಾರತೀಯ ತತ್ವ ಶಾಸ್ತ್ರದ ಇತಿಹಾಸ ಗ್ರಂಥದಲ್ಲಿ

In my opinion Jayathirtha & Vyasathirtha present the highest dialectical skill in Indian thought The readers can realise the strength and uncompromising impressiveness of the dualistic position by reading vyasathirtha The logical skill & depth of acute dialectical thinking shown by vyasathirtha stands almost unrivalled in the whole field of Indian thought [2]

ವ್ಯಾಸರಾಜರು ಹನ್ನೆರಡು ವರ್ಷ ತಿರುಪತಿಯಲ್ಲಿ ಶ್ರೀನಿವಾಸನ ಸೇವೆ ಮಾಡಿ ಹಿಂತಿರುಗಿ ವಿಜಯನಗರದಲ್ಲಿ ಯಂತ್ರೋದ್ಧಾರಕ ಪ್ರಾಣದೇವರ ಪ್ರತಿಷ್ಠೆ ಮಾಡಿದರು ೧೫೦೦–೧ರಲ್ಲಿ ಹಿಂದೂ ಧರ್ಮದ ಸಂರಕ್ಷಣೆಗಾಗಿ

---

1 ಚಂದ್ರಿಕಾ–(ವಿಶೇಷ ಸಂಚಿಕೆ) ಲೇಖನ. ದ್ವೈತದರ್ಶನದಲ್ಲಿ ಶ್ರೀ ವ್ಯಾಸರಾಯರ ಸ್ಥಾನ – ಡಾ॥ ಬಿ ಎಸ್ ಕೆ ಶರ್ಮ – ಪು 10

2 History of Indian Philosophy volu IV Preface Page VIII

ಈ ಮೂಲಕ ವಿಜಯನಗರ ಸಾಮ್ರಾಜ್ಯದ ಭದ್ರವಾದ ಬುನಾದಿಗಾಗಿ ೭೩೨ ಸ್ಥಳಗಳಲ್ಲಿ ದಕ್ಷಿಣದಲ್ಲಿ ಆಯ್ದು ಪ್ರಾಣದೇವರ ಪ್ರತಿಷ್ಠಾಪನೆಯನ್ನು ಮಾಡಿದ್ದರು. ವ್ಯಾಸರಾಜರ ಸಾಕ್ಷಾತ್ ಶಿಷ್ಯರಾದ ಶ್ರೀವಿಜಯೀಂದ್ರರು "ದ್ವಾತ್ರಿಂಶತ್ಸಪ್ತಶತಕೆ ಮೂರ್ತಿರ್ಮಾರುತ ಪ್ರಭೋಃ । ಪ್ರತಿಷ್ಠಾತ ಸ್ಮೃತಿ ಖ್ಯಾತ "[1] ಈ ವಿಷಯವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ವ್ಯಾಸರಾಜರ ಸಾಕ್ಷಾತ್ ಗುರುಗಳಾಗಿದ್ದ ಶ್ರೀಪಾದರಾಜರು 'ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸಮುನಿರಾಯರ ಸನ್ಮಾನದಿರವ' ಎಂದು ಹೇಳಿದ್ದಾರೆ. ಪುರಂದರದಾಸರಂತೂ 'ಈಸುಮುನಿಗಳಿದ್ದೇನು ಮಾಡಿದರು ವ್ಯಾಸಮುನಿ ಮಧ್ವ ಮತವನುದ್ಧರಿಸಿದ' ಎಂದಿದ್ದಾರೆ.

'ದಾಸಕೂಟ'ದ ಸಂಸ್ಕೃತಿ ವ್ಯಾಸರಾಜರ ಕೊಡುಗೆ. ಕಾಲಲ್ಲಿ ಗೆಜ್ಜೆ, ಕೊರಳಲ್ಲಿ ತುಳಸೀಮಾಲೆ, ಹಣೆಯ ಮೇಲೆ ಊರ್ಧ್ವಪುಂಡ್ರ, ಮೈಮೇಲೆ ಮುದ್ರಾಂಕನ, ದಂಡಿಗೆ ಬೆತ್ತ, ಗೋಪಾಳಬುಟ್ಟಿ, ಮಧುಕರ ವೃತ್ತಿ, ಗಾಯನ, ನರ್ತನ, ತೀರ್ಥಕ್ಷೇತ್ರಗಳ ಸಂದರ್ಶನ, ಹರಿದಿನ-ವ್ರತಾಚರಣೆ, ಆತ್ಮಶುದ್ಧಿ ಇಂಥ ಹೊಸದೊಂದು ಹರಿದಾಸ ಸಂಸ್ಕೃತಿ ರೂಪುಗೊಂಡಿತು. ೧೭೨೮ ರಿಂದ ೧೭೩೬ರ ಸುಮಾರಿನಲ್ಲಿದ್ದ ತಂಜಾವೂರಿನ ದೊರೆ ತುಳಜಾಜಿ 'ಸಂಗೀತಸಾರಾಮೃತ' ರಚಿಸಿದ್ದು ಅದರಲ್ಲಿ ಅವನು ವ್ಯಾಸರಾಜರನ್ನು ಸ್ಮರಿಸಿ ಅವರನ್ನು 'ಪ್ರಸಿದ್ಧ ಸಂಗೀತ ವಿದ್ಯಾ ಸಂಪ್ರದಾಯ ಪ್ರವರ್ತಕ' ಎಂದು ಕೊಂಡಾಡಿದ್ದಾನೆ.

ದಾಸಸಾಹಿತ್ಯದ ಆಚಾರ್ಯಪುರುಷರಾದ ಶ್ರೀ ಪುರಂದರದಾಸರಿಗೆ ವ್ಯಾಸರಾಯರ ಚರಣ ಕಮಲದ ದರುಶನ ಮಾತ್ರದಿಂದಲೇ ಅವರ ಸಾಸಿರ ಕುಲಕೋಟಿ ಪಾವನವಾಯಿತು. ಶ್ರೀಶನನ್ನು ಭಜಿಸುವ ಅಧಿಕಾರ ದೊರಕಿತು. ಕರ್ನಾಟಕ ವಿದ್ಯಾಸಿಂಹಾಸನಾಧೀಶ್ವರರಾಗಿ ತಮ್ಮ ತಪೋಸಾಮರ್ಥ್ಯದಿಂದ, ಆಧ್ಯಾತ್ಮಿಕ ತೇಜೋಪ್ರಭಾವದಿಂದ ಕರ್ನಾಟಕದ ಸಾಂಸ್ಕೃತಿಕ ದಿಗ್ವಿಜಯಕ್ಕೆ ಕಾರಣರಾದ ಶ್ರೀ ವ್ಯಾಸರಾಜರು ಪಂಡಿತಪ್ರಪಂಚದ ಪ್ರಚಂಡಶಕ್ತಿ. ಶ್ರೀ ರಾಜೇಂದ್ರತೀರ್ಥರ ಸತ್ಪರಂಪರೆಯ ಶ್ರೀ ಬ್ರಹ್ಮಣ್ಯ ತೀರ್ಥರಿಂದ ಆಶ್ರಮ

---

1 ವ್ಯಾಸರಾಜ ಸ್ತೋತ್ರ—ವಿಜಯೀಂದ್ರರು

ಸ್ವೀಕರಿಸಿ ಶ್ರೀಪಾದರಾಜರಲ್ಲಿ ವಿದ್ಯಾಭ್ಯಾಸ ಮಾಡಿ ಅಭೂತಪೂರ್ವ ಪಾಂಡಿತ್ಯವನ್ನು ಪಡೆದ ಶ್ರೀವ್ಯಾಸರಾಜರು ಕನ್ನಡ ಸಾಹಿತ್ಯ ಸರಸ್ವತಿಯ ಕಂಠೀಹಾರ

ಸಾರಸ್ವತ ಪ್ರಪಂಚದ ರತ್ನತ್ರಯಗಳೆಂದೇ ಖ್ಯಾತವಾದ ಚಂದ್ರಿಕ ನ್ಯಾಯಾಮೃತ, ತರ್ಕತಾಂಡವ ಎಂಬ ಉದ್ಗ್ರಂಥಗಳನ್ನು ರಚಿಸಿ ಸಂಸ್ಕೃತ ಹಾಗೂ ಕನ್ನಡಭಾಷಾ ನೃತ್ಯತಾಂಡವವನ್ನು ಲೀಲಾಜಾಲವಾಗಿ ಮಾಡುತ್ತಾ ಭಗವಂತನನ್ನು ಪರಿಪರಿಯಾಗಿ ಅಲಂಕರಿಸಿದ ಮಹಾನುಭಾವರು ಇವರು ತೀಕ್ಷ್ಣಮತಿ ತರ್ಕಪ್ರವಿಷ್ಟ, ವಾದಪ್ರಖರ, ಪ್ರಾತಿಭಪ್ರೌಢ, ಅಗಾಧ ಪಾಂಡಿತ್ಯಗಳ ತವರಾಗಿದ್ದ ಶ್ರೀ ವ್ಯಾಸರಾಜರು ವಿದ್ಯಾನಗರವಾಗಿದ್ದ ವಿಜಯನಗರದ ವ್ಯಾಪಕ ವೇದಾಂತವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದು ಕಾಶಿ. ಕಂಚಿ ಕುಂಭಕೋಣ, ಉಡುಪಿ, ಒಂಗಾಲ, ಮುಳಬಾಗಿಲುಗಳಲ್ಲಿ ಶಾಖಾ ವಿದ್ಯಾಪೀಠಗಳನ್ನು ಸ್ಥಾಪಿಸಿ ವಿದ್ಯೆಯ ವಿದ್ಯುತ್ ಪ್ರಚಾರವನ್ನು ಕೈಗೊಂಡರು ವಿಜಯೀಂದ್ರರು ವಾದಿರಾಜರು, ಗೋವಿಂದ ಒಡೆಯರ್, ಶ್ರೀನಿವಾಸತೀರ್ಥರು ಮುಂತಾದ ಇಪ್ಪತ್ನಾಲ್ಕು ಅತಿರಥಮಹಾರಥ ಯತಿಗಳಿಗೆ ವಿದ್ಯಾಗುರುಗಳಾಗಿದ್ದ ಶ್ರೀ ವ್ಯಾಸರಾಜರು ವೇದವ್ಯಾಸ ಪ್ರಣೀತವಾದ ವ್ಯಾಸಸಾಹಿತ್ಯವನ್ನು ಪುನಸ್ಸಂಸ್ಕೃತವಾಗಿ ಮೂಡಿಸಿದರು

ವಾದಿರಾಜರು, ಪುರಂದರದಾಸರು, ಕನಕದಾಸರು ಮುಂತಾದ ದಾಸಶ್ರೇಷ್ಠರುಗಳನ್ನು ಉದ್ದೀಪಿಸಿ, ಅವರಿಗೆ ಪ್ರೇರಕಶಕ್ತಿಯಾಗಿ ನಿಂತು ದಾಸಕೂಟವನ್ನು ಉದ್ಧಾರಿಸಿದ ದಾಸಕೂಟ ವ್ಯಾಸರಾದರು ಶ್ರೀ ವ್ಯಾಸರಾಜರು ಮಧ್ವಸರೋವರದ ಶುದ್ಧ ತತ್ವಜ್ಞಾನದ ತೀರ್ಥವನ್ನು ತಿಳಿಗನ್ನಡದಲ್ಲಿ ಮನೆಮನೆಗೆ ಹಂಚುವ ಹೊಸ ವ್ಯವಸ್ಥೆಯೊಂದನ್ನು ಇವರು ಪ್ರಾರಂಭಿಸಿದರು ಕನ್ನಡದ ಕಾಂತಿಯನ್ನು ತಮ್ಮ ಕೀರ್ತನೆಗಳಲ್ಲಿ ಭಕ್ತಿಯುಕ್ತಿ ರತ್ನಗಳಿಂದ ಕಾಣಿಸುತ್ತಿದ್ದ ದಾಸವರ್ಯರುಗಳ ಕನ್ನಡ ಸಾಹಿತ್ಯವನ್ನು ವ್ಯಾಸಸಾಹಿತ್ಯಕ್ಕೆ ಸರಿದೊರೆಯಾಗಿ ಗಣಿಸಿ ಗೌರವಿಸಿದ ದಾಸಕೂಟ ದಿಗ್ಗಜ ಗುರುವರೇಣ್ಯರೆಂದರೆ ಶ್ರೀ ವ್ಯಾಸರಾಜರು

ಕನ್ನಡದ ಪದ್ಯಗಳನ್ನು ತಮ್ಮ ವ್ಯಾಸಪೀಠದಲ್ಲಿಟ್ಟು ಪಂಡಿತ ಪುಂಡರೀಕರೆನ್ನಿರ ಹಾಡಿಕಟ್ಟಿ, ಅದನ್ನು ಸ್ವರದಾರೋಹಿಸಿತ್ತು ಎಂದು ಮಹಾಮನ್ನಣೆಯನ್ನಿತ್ತ ಮಹತ್ತರವಾಹಿಯಾದ ಶ್ರೀ ವ್ಯಾಸರಾಜರು ಸಾಕ್ಷಾತ್ ಗುರುಗಳಾದ ಶ್ರೀ ಪಾದರಾಜರಿಂದಲೇ "ಲೋಕದಲ್ಲಿ ಒಂದೊಂದು ಸರ್ವೋತ್ಕೃಷ್ಟ ಗುಣಗಳು ಒಬ್ಬೊಬ್ಬರಲ್ಲಿರುವುದು ಸಾಧ್ಯ ಎಲ್ಲಾ ಸದ್ಗುಣಗಳು ಅತ್ಯುನ್ನತ ಮಟ್ಟದಲ್ಲಿ ಇರುವುದು ಬಹಳ ಅಪರೂಪ ಸಕಲ ಕಲಾವಿದ್ಯಾವಿಲಾಸವನ್ನು ನಾರದನಲ್ಲಿ ಕಾಣಬಹುದು ಶತ್ರುಗಳನ್ನು ಸಂಹರಿಸುವ ಮಹಾಪರಾಕ್ರಮವನ್ನು ಭಾರ್ಗವನಲ್ಲಿ ಕಾಣಬಹುದು ಬುದ್ಧಿಕುಶಲತೆಯನ್ನು ಬೃಹಸ್ಪತಿಯಲ್ಲಿ ಕಾಣಬಹುದು. ದಿವ್ಯತೇಜಸ್ಸನ್ನು ಸೂರ್ಯನಲ್ಲಿ ಕಾಣಬಹುದು ಕಾಂತಿಯ ಆಹ್ಲಾದವನ್ನು ಚಂದ್ರನಲ್ಲಿ ಕಾಣಬಹುದು ಪಾವಿತ್ರ್ಯವನ್ನು ಅಗ್ನಿಯಲ್ಲಿ ಕಾಣಬಹುದು. ಪ್ರಚಂಡ ಧೈರ್ಯವನ್ನು ಪರ್ವತರಾಜನಲ್ಲಿ ಕಾಣಬಹುದು ಔದಾರ್ಯದ ಔನ್ನತ್ಯವನ್ನು ಕಲ್ಪವೃಕ್ಷದಲ್ಲಿ ಕಾಣಬಹುದು ವಿಶಿಷ್ಟವಾದ ವಿಚಿತ್ರಚರ್ಯೆಗಳನ್ನು ವಾಸುದೇವನಲ್ಲಿ ಕಾಣಬಹುದು ಆದರೆ ನಿನ್ನಲ್ಲಿ ಈ ಸಕಲಗುಣಗಳೂ ಪರಿಪೂರ್ಣವಾಗಿವೆ ಎಂಬ ಪ್ರಶಸ್ತಿಯನ್ನು ಪಡೆದವರು ಶ್ರೀ ವ್ಯಾಸರಾಜರು 'ಈಸುಯತಿಗಳಿದ್ದೇನು ಮಾಡಿದರು ವ್ಯಾಸಮುನಿ ಮಧ್ವಮತವನ್ನುದ್ಧರಿಸಿದ' ಎಂಬಂತೆ ವ್ಯಾಸರಾಯರು ಏಳನೂರ ಮುವತ್ತೆರಡು ಪ್ರಾಣದೇವರ ಪ್ರತಿಷ್ಠೆ ಮಾಡಿ ಸಹೋದರಾದ ವಾಯುದೇವರ ವಿಜಯಪತಾಕೆಯನ್ನು ಮುಗಿಲೆತ್ತರ ಹಾರಿಸಿದರು ಬಾಲಬ್ರಹ್ಮಚಾರಿಗಳಾಗಿ, ಮಹಾಜ್ಞಾನಿಗಳಾಗಿ. ಸಿರಿಗನ್ನಡದ ಕೀರ್ತನಕಾರರಾಗಿ, ಭಕ್ತಿ ಮಾರ್ಗದ ಅಧ್ವರ್ಯ ಧುರೀಣರಾಗಿ ವ್ಯಾಸರಾಜರು, ಜನರಲ್ಲಿ ಭಕ್ತಿಭಾವನೆಯನ್ನು ಸೂರೆಮಾಡಿ ಹೆಚ್ಚಿಸಿದರು ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕೆಗಳನ್ನು ಬರೆದ ಹೃದಯದಿಂದಲೇ ಕನ್ನಡ ಪದ್ಯ ಸುಳಾದಿಗಳನ್ನು ರಚಿಸಿ ಸಂಸ್ಕೃತದ ಪಾಂಡಿತ್ಯಸಿದ್ಧಿಯನ್ನು ದಾಸಸಾಹಿತ್ಯಕ್ಕೆ ಧಾರೆ ಎರೆದರು ವೃತ್ತನಾಮವನ್ನು ವ್ಯಾಪಕವಾಗಿ ಬಳಕೆಗೆ ತಂದರು ಇಡೀ ಭಗವದ್ಗೀತೆಯ ಸಾರವನ್ನು ವ್ಯಾಸರಾಜರು ವೃತ್ತನಾಮದ ರೂಪದಲ್ಲಿ ಕನ್ನಡ ಸಾಹಿತ್ಯಕ್ಕೆ ಕಾಣಿಕೆಯಾಗಿತ್ತಿದ್ದಾರೆ ಒಂದು ಪದದ ಪಲ್ಲವಿ, ನಂತರ ಒಂದು ವೃತ್ತ ಅನಂತರ ಅದರ ಸಾಹಿತಿಯನ್ನು ಬರೆಯುವ ವೃತ್ತಾಕಾರದ ತರಂಗಪ್ರಭಾವ

ವ್ಯಾಸರಾಜರು ಸನ್ಯಾಸ ರತ್ನಾಕರರು ಮುನಿತ್ರಯರಲ್ಲಿ ಒಬ್ಬರಾಗಿ, ಕೃಷ್ಣ ದೇವರಾಯನ ಕುಹಯೋಗವನ್ನು ನಿವಾರಿಸಿ, ವೈಷ್ಣವ ಸಿದ್ಧಾಂತ ಪ್ರಚಾರ ದೀಕ್ಷಾದಕ್ಷರಾಗಿ, ವೈಷ್ಣವ ಕಮಲ ಸೂರ್ಯರಾಗಿ, ವಾದಿಘಣೆಗರುಡರಾಗಿ ವೈಷ್ಣವ ಕುಲೋತ್ಕೃಷ್ಟವಿಶಿಷ್ಟರಾಗಿ ಸಮಾಜದ ಸರ್ವತೋಮುಖ ಸೇವೆ ಮಾಡಿದ ಶ್ರೀವ್ಯಾಸರಾಜರು ಕರ್ನಾಟಕದಲ್ಲಿ ಭಕ್ತಿಪಂಥದ ಬೀಜ ಬಿತ್ತಿದ ಭಾಗವತ ಶ್ರೇಷ್ಠರು ವ್ಯಾಸ ಸಮುದ್ರವನ್ನು, ತುಂಗಾ ಕಾಲುವೆಯನ್ನು, ಹಂಪೆಯ ವಿಜಯ ವಿಠಲ ಮಂದಿರವನ್ನು ಮಳ್ಳೂರಿನ ಅಂಬೆಗಾಲು ಕೃಷ್ಣನ ಪ್ರತಿಷ್ಠೆಯನ್ನು ಚನ್ನಪಟ್ಟಣ ಶ್ರೀನಿವಾಸ ಮಂದಿರವನ್ನು, ವಿಜಯನಗರದ ವಿಶ್ವವಿದ್ಯಾನಿಲಯವನ್ನು ನಿರ್ಮಿಸಿ ನಾಡಿನ ಉದ್ದಗಲಕ್ಕೂ ವಿದ್ಯಾದಾನ, ಧಾರ್ಮಿಕ ಪ್ರಸಾರದ ಸಮೃದ್ಧ ಸಾಧನೆ ಮಾಡಿ ಯತಿಶ್ರೇಷ್ಠ ಧರ್ಮಕಾರಣಿಗಳಾಗಿ ಕಂಗೊಳಿಸಿದರು

ತಿರುಪತಿಯಲ್ಲಿ ಸಾಳುವ ನರಸಿಂಹನ ದುಡುಕಿನಿಂದ ನಿಂತುಹೋಗಿದ್ದ ದೇವತಾ ಸೇವೆಗಳನ್ನು ಊರ್ಜಿತಗೊಳಿಸಿ, ಹನ್ನೆರಡು ವರ್ಷಗಳ ಕಾಲ ಶ್ರೀನಿವಾಸನ ಭವ್ಯ ಮೂರ್ತಿಯನ್ನು ತಂತ್ರಸಾರೋಕ್ತ ಪೂಜಿಸಿ, ಅರ್ಚಕ ಮನೆತನದ ಮಗುವಿಗೆ ಪ್ರೀತಿಪೂರ್ವಕವಾಗಿ ಆ ಹಕ್ಕನ್ನು ಹಿಂದಿರುಗಿಸಿದರು ಐದು ಜನ ಸಾರ್ವಭೌಮರಿಗೆ ಐವತ್ತು ವರ್ಷಗಳ ಕಾಲ ರಾಜ ಗುರುಗಳಾಗಿ ವಿಜೃಂಭಿಸಿ ಅನೇಕ ದೇವ ಮಂದಿರಗಳನ್ನು, ಗುಡಿ ಗೋಪುರಗಳನ್ನು ನಿರ್ಮಿಸಿ ದತ್ತಿದಾನದ ವ್ಯವಸ್ಥೆ ಮಾಡಿ ಇಡೀ ಧಾರ್ಮಿಕ ಪರಿಸ್ಥಿತಿಯನ್ನು ಜೀರ್ಣೋದ್ಧಾರ ಮಾಡಿದರು. ತಮ್ಮ ಹರಿದಾಸ ದೀಕ್ಷೆಯಿಂದ ಕನ್ನಡ ಸಾಹಿತ್ಯಕ್ಕೂ, ಕರ್ನಾಟಕ ಸಂಗೀತಕ್ಕೂ ಅನುಪಮವಾದ ಸೇವೆ ಸಲ್ಲಿಸಿ ನಾಡಿನೆಲ್ಲೆಡೆ ಜನ ಸಾಮಾನ್ಯರಿಗೆ ಬದುಕಿನಲ್ಲಿ ಹೊಸದೊಂದು ದೃಷ್ಟಿ ಚೇತನವನ್ನು ಮೂಡಿಸಿದರು.

ವೇದವ್ಯಾಸರ ಧರ್ಮ ಭಾಗವತ ಧರ್ಮ ವೇದವ್ಯಾಸರ ಪುತ್ರ, ಶುಕ ಮಹರ್ಷಿಗಳು ಪ್ರಚಾರ ಮಾಡಿದ ಧರ್ಮ ಭಾಗವತ ಧರ್ಮ ವೇದವ್ಯಾಸರ ಒಳಿ ಒಪರಿಕಾವ್ಯಮದಲ್ಲಿ ಎಷ್ಟರಾದ ಶ್ರೀ ಮಹಾನಂದ ತೀರ್ಥರ ಧರ್ಮ ಭಾಗವತ ಧರ್ಮ ಭಗವಂತನ ಮಹಿಮೆಯನ್ನು ವ್ಯಾಪಕವಾಗಿ ಪ್ರಚಾರ

ಮಾಡುತ್ತ ಹೊರಟ ಈ ಮಹಾನ ದೂರದರ್ಶಿಗಳಾಗಿ ಪ್ರಖ್ಯಾತರಾಗಿ. ಹರಿದಾಸ ಪಂಥದ ಈ ಭಕ್ತಿಮಾರ್ಗವೆಂಬ ರಾಜಮಾರ್ಗವನ್ನು ಮುಂದಿನ ಹರಿದಾಸರಿಗೆ ಪರಿಚಯಿಸಿಕೊಟ್ಟವರು ಶ್ರೀ ವ್ಯಾಸರಾಜರು ವಿಜಯನಗರದ ರತ್ನ ಸಿಂಹಾಸನದಲ್ಲಿ ತಮ್ಮನ್ನು ಕೂಡಿಸಿ ರತ್ನಾಭಿಷೇಕ ಮಾಡಿದಾಗ "ಬಂದ ಕೀರುತಿಯೆಲ್ಲ ಶ್ರೀ ಕೃಷ್ಣ ನಿನ್ನ ದಯೆ, ಮಂದಮಾನವನಾಗಿಹ ಆಳಿದಮುಪ್ಪ ದೇಸಿಯ್ಯ, ಆನಂದತೀರ್ಥರ ಮತವೊಂದಿದ್ದ ಕಾರಣ ಸಂಪದವಾಯಿತು ಮನಕೆ ಸಂತೋಷವಡಗಿತು ಇಂದುಧರಾದಿಪೋಷ ಪಂಡಿತ ಶ್ರೀಕೃಷ್ಣ" ಎಂದು ಸಮಸ್ತ ಮನ್ನಣೆಯನ್ನು ಕೃಷ್ಣನಿಗರ್ಪಿಸಿ ಮುಂದಿನ ಹರಿದಾಸ ಪೀಳಿಗೆಗೆ ಕ್ರಾಂತದರ್ಶಿ ಮಾರ್ಗದರ್ಶಿಗಳಾದವರು ಶ್ರೀವ್ಯಾಸರಾಜರು "ಪರಮ ಪಾವನನೀವ ಶ್ರೀಕೃಷ್ಣ ನಿರುತಾಗಿ ನರರ ನೀವಿನ್ನೇನ ಬೇಡವ್ವೋ" ಎಂಬ ಅಮೃತಸದೃಶ ಸಂದೇಶವನ್ನು ಹರಿದಾಸ ಕೂಟಕ್ಕರಿಗಿತ್ತು "ಕಂಸಾರಿಯೆಂದು ಸಂಸಾರದಾಟುವೆ ಶ್ರೀಪತಿ ಯೆಂದು ಪಾಪಸೆರೆ ಬಿಟ್ಟವೆ, ಕಂಜನಾಭ ಎಂದು ಅಂಜನವೆ ಜನನ. ಹರಿಯ ಹೆಸರಿಂದ ಬದುಕುವ ದಾಸ ನಾನು, ಸಿರಿಕೃಷ್ಣದಾಸರ ದಾಸ ನಾನು" ಎಂದು ದಾಸ್ಯ ಭಾವದಿಂದ ಶ್ರೀಕೃಷ್ಣನನ್ನು ಸ್ತುತಿಸುವ ಸತ್ಸಂಪ್ರದಾಯವನ್ನು ಸಾದೋ ದ್ಧಾರವಾಗಿ ಬೆಳಗಿಸಿದರು ಜಗದ್ಭಕ್ತರನ್ನು ಕಂಡರೆ ಶ್ರೀಹರಿಗೆ ಇರುವ ಅಪಾರ ವಾತ್ಸಲ್ಯ ಹಾಗೂ ಕ್ಷಿಪ್ರಕಳಕಳಿಯನ್ನು ಕುರಿತು "ಕರಿ ಮೊರೆಯಿಡಲು ವಾಕ್ಯವ ಕೇಳಿ ಸಿರಿಗೆ ಹೇಳದೆ ಬಂದ, ಉರಗಮಂಚ ಧುಮುಕಿ, ಕರವಿತ್ತ ಪರಿಂಚಿ ಕೈಲಾಘವನೊಲ್ಲದೆ ಭರದಿ ಹನುಮನಿತ್ತ ಹಾವಿಗೆಯ ಹಾಕಿ, ಗರುಡನೊದಗಿ ಬರೆ ತಿರುಗಿನೋಡದ ಬಂದ,ನಿನ್ನ ತ್ವರಿತಕ್ಕೆ ನಮೋ ನಮೋ ನಮೋ ಎಂಬೆ ಸಿರಿ ಕೃಷ್ಣ" ಎಂದು ಭಕ್ತಾನುಕಂಪಿ,ಭಕ್ತವತ್ಸಲ ಭಕ್ತಪರಾಧೀನನಾದ ಭಗವಂತನನ್ನು ಹೃತ್ಪೂರ್ವಕವಾಗಿ ಹಾಡಿ ಕೊಂಡಾಡಿದರು "ಎನ್ನ ಬಿಂಬ ಮೂರುತಿಯ ಪೂಜಿಸುವೆ ನಾನು, ಯಾತ್ರೆ ಪ್ರದಕ್ಷಿಣೆ ಶಯನ ನಮಸ್ಕಾರ. ಶಾಸ್ತ್ರ ಮಾತು ಗಳಲ್ಲ ಮಂತ್ರಂಗಳು" ಎಂಬ ಸುಲಭ ಪೂಜಾ ವಿಧಾನವನ್ನು ಅನುಸಂಧಾನ ಕ್ರಮದ ಅಗತ್ಯವನ್ನು ಆದರ್ಶವೆನ್ನುವಂತೆ ತೋರಿಸಿಕೊಟ್ಟ ಮಾನಸ ಪೂಜಾ ಧುರಂಧರರು ಶ್ರೀ ವ್ಯಾಸರಾಜರು

ಆನಂದತೀರ್ಥರ ದ್ವಾದಶಸ್ತೋತ್ರದಲ್ಲಿನ ಸಂತತಂ ಚಿಂತಯೇನಂತಂ

ಅಂತಕಾಲೇ ವಿಶೇಷತಃ ಎಂಬ ಉಕ್ತಿಯಂತೆ ವ್ಯಾಸರಾಜರು ಒಂದು ಸುಳಾದಿಯ ಜೊತೆಯಾಗಿ "ಸಂತತವಲಿ ನಿಮ್ಮ ನಾಮ ನಾಲಿಗೆಯಲ್ಲಿ ! ಅಂತ್ಯ ಕಾಲದಲ್ಲಿ ವಿಶೇಷವಾಗಲೋ ಶ್ರೀ ಕೃಷ್ಣಾ" ಎಂದು ನಾಮ ಸಂಕೀರ್ತನ ಮಹತ್ವವನ್ನು ತಿಳಿಸಿದ್ದಾರೆ. ಪಾಪದ ಅಡವಿಗೆ ಬೆಂಕಿ, ತಾಪದ ಬೆಂಕಿಗೆ ಮೋಡ, ಮೋಹದ ಮೋಡಕ್ಕೆ ಬಿರುಗಾಳಿ, ಕೋಪದ ಬಿರುಗಾಳಿಗೆ ಸರ್ಪ ಸಂಸಾರ ಸರ್ಪಕ್ಕೆ ಗರುಡನೆಂದರೆ ಶ್ರೀಕೃಷ್ಣನ ಪಾದ ಸೇವೆಯೊಂದೇ, ಎಂಬುದು ವ್ಯಾಸರಾಜರ ದೃಢವಾದ ನಂಬಿಕೆ.

ವ್ಯಾಸರಾಜರು ವ್ಯಾಸ ಸಾಹಿತ್ಯದ ಔನ್ನತ್ಯಕ್ಕೆ ದಾಸ ಸಾಹಿತ್ಯವನ್ನು, ದಾಸ ಕೂಟಸ್ಥರನ್ನೂ ಕೊಂಡೊಯ್ದು ಸಾಧಿಸಿ ಸಾಹಿತ್ಯ ಸಂಸ್ಕೃತಿ ಧರ್ಮ ರಂಗಗಳಿಗೆ ಸಂಜೀವಿನಿ ಶಕ್ತಿಯನ್ನು ನೀಡಿ, ಸಮಾಜದ ಓರೆಕೋರೆಗಳನ್ನು ನೋಡಿ ತಿದ್ದಿ, ಸಾಮಾಜಿಕ ಹೊಣೆಗಾರಿಕೆಯನ್ನು ಅರಿತು ಸೂಕ್ಷ್ಮ ದೃಷ್ಟಿಯಿಂದ ಎಲ್ಲವನ್ನೂ ಕಾಣಬಲ್ಲ ನೂರಾರು ಕನಕನ ಕಿಂಡಿಗಳನ್ನು ತೆರೆದು, ದಾಸ ಸಾಹಿತ್ಯದ ಅತ್ಯದ್ಭುತ ಜಗತ್ತೊಂದನ್ನು ಜನತೆಯ ಕಣ್ಮುಂದೆ ನಿಲ್ಲಿಸಿ ಚಿರಪುರುಷರಾದರು

## ವಾದಿರಾಜರು

ನೂರಿಪ್ಪತ್ತು ವರ್ಷಗಳ ಕಾಲ ಸಾರ್ಥಕ ಬದುಕನ್ನು ಬದುಕಿದ ವಾದಿರಾಜರು ವ್ಯಾಸಕೂಟದ-ದಾಸಕೂಟಗಳ ಸುವರ್ಣ ಸೇತುವೆಯಾಗಿ, ಭಾವೀ ಸಮೀರರೆಂದೇ ಇಡೀ ಜನಾಂಗ ಗೌರವಿಸಿದ ಮಹಾ ಪುರುಷರಾದರು ವಿಜಯ ನಗರದ ಅರಸರಿಂದ ಪ್ರಸಂಗಾಭರಣ ತೀರ್ಥರೆಂಬ ಗೌರವಕ್ಕೆ ಭಾಜನರಾಗಿದ್ದ ವಾದಿರಾಜರು ಸಂಸ್ಕೃತದಲ್ಲಿ ರುಕ್ಮಿಣೀಶ ವಿಜಯ, ತೀರ್ಥ ಪ್ರಬಂಧ, ಯುಕ್ತಿ ಮಲ್ಲಿಕಾ ಸರಸಭಾರತೀವಿಲಾಸ ಮುಂತಾದ ವಿದ್ವತ್ಪೂರ್ಣ ಕೃತಿಗಳನ್ನು ಬರೆದರೂ ಕನ್ನಡ ಹರಿದಾಸ ಸಾಹಿತ್ಯಕ್ಕೆ ದಕ್ಷಿಣ ಕನ್ನಡದ ಅಮೃತ ಕೊಡುಗೆ ಎನ್ನುವಂತೆ ಅಪೂರ್ವ ಕೃತಿಗಳನ್ನು ರಚಿಸಿದರು ಧರ್ಮಸ್ಥಳದಲ್ಲಿ ಮಂಜು ನಾಥನ ಪ್ರತಿಷ್ಠೆ ಮಾಡಿ ಉಡುಪಿಯಲ್ಲಿ ಕೃಷ್ಣನ ಪೂಜೆಗೆ ಪರ್ಯಾಯದ ವ್ಯವಸ್ಥೆ ಮಾಡಿದರು ತಮ್ಮ ಆರಾಧ್ಯಮೂರ್ತಿ ಹಯಗ್ರೀವದೇವರ

ಸಾಕ್ಷಾತ್ ಒಲಿದು ಬಂದು ಸನ್ನಿಧಾನವನ್ನು ಸ್ವಯಂ ವ್ಯಕ್ತಗೊಳಿಸಿದ ವೈಷ್ಣ ಬ್ರಾಹ್ಮಣ ಜನಾಂಗದವರನ್ನು ತಮ್ಮ ಮಠದ ಮುಖ್ಯ ಶಿಷ್ಯರನ್ನಾಗಿ ಪಡೆದರು ವೈಕುಂಠ ವರ್ಣನೆ, ಲಕ್ಷ್ಮೀ ಶೋಭಾನೆ, ಗುಂಡಕ್ರಿಯೆ, ಸ್ವಪ್ನಪದ ಭ್ರಮರ ಗೀತೆ, ನಾರದ ಕೊರವಂಜಿ ಸ್ವಪ್ನಗದ್ಯ ಭಾಗವತಸಾರ ಕೀರ್ತನೆ, ಕೇಶವ ನಾಮ, ಕೀಚಕವಧ ನೈವೇದ್ಯ ಪ್ರಕರಣ ಸುಳಾದಿಗಳು. ಉಗಾಭೋಗಗಳು, ಕೀರ್ತನೆಗಳು ಹೀಗೆ ಅತಿ ವ್ಯಾಪಕವಾಗಿ ಕನ್ನಡ ಹರಿದಾಸ ಸಾಹಿತ್ಯದ ರಚನೆ ಪ್ರಚಾರದಿಂದ ನಾಡಿನ ಸಂಸ್ಕೃತಿ ರಂಗವನ್ನು ಸಮೃದ್ಧ ಮಾಡಿದರು

ವರ್ಣರಂಜಿತವಾಗಿರುವ ಹರಿದಾಸ ಸಾಹಿತ್ಯದ ಬಾನಿನಲ್ಲಿ ವೈನತೇಯ ನಂತೆ ಸ್ವಚ್ಛಂದವಾಗಿ ಸಂಚರಿಸಿದ ಹರಿದಾಸ ಧೀಮಂತರು ವಾದಿರಾಜರು ಆಧ್ಯಾತ್ಮ ವಿಚಾರ ಧಾರೆಯನ್ನು ಸಾಮಾಜಿಕ ಲೋಕನೀತಿಯನ್ನು ತತ್ತ್ವ ಗೀತೆ ಗಳನ್ನಾಗಿ ಸೃಷ್ಟಿಸಿ, ಅಂತರಂಗ ಸಾಧನೆಗೆ, ಆತ್ಮೋದ್ಧಾರಕ್ಕೆ ಸಮಾಜದ ಶುದ್ಧೀಕರಣಕ್ಕೆ ಕರೆ ನೀಡಿದರು ವಾದಿರಾಜರು ಅವರ ಕನ್ನಡ ಹಾಡುಗಳು ಇಂದಿಗೂ ಕರ್ನಾಟಕದ ಮೂಲೆ ಮೂಲೆಯಲ್ಲಿ ಪ್ರಚಲಿತವಿವೆ ದಕ್ಷಿಣ ಕನ್ನಡ ವನ್ನು ಕೇಂದ್ರ ಬಿಂದುವನ್ನಾಗಿ ಕೊಂಡು ಇಡೀ ನಾಡಿನ ಜನತೆಗೆ ಅತ್ಯಂತ ಹತ್ತಿರದ ವ್ಯಕ್ತಿಯಾಗಿ ಶತಮಾನಗಳಿಗೂ ಮೀರಿ ಬೆಳೆದು ನಿಂತ ಶಕ್ತಿಯಾಗಿ ವಾದಿರಾಜರು ಒಂದು ಜನಾಂಗದ ಸಂಸ್ಕೃತಿ ಸದಾಚಾರವನ್ನು ಸಾಹಿತ್ಯದ ಮೂಲಕ ರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ ಬದುಕಿನ ಬಹುಮುಖದ ಅನುಭವಗಳನ್ನು ಅರಗಿಸಿಕೊಂಡ ವಾದಿರಾಜರು ಮೂಲಭೂತವಾಗಿ ಮಾನವ ಜೀವನ ಮೌಲ್ಯಗಳಿಗಾಗಿ ಮಿಡಿದು ಜನತೆಯ ಉದ್ಧಾರಕ್ಕಾಗಿ ಕಾವ್ಯಸೃಷ್ಟಿ ಕ್ರಿಯೆಯನ್ನಾಗಿ ತೊಡಗಿಸಿಕೊಂಡವರು ಸತ್ಯವನ್ನು ಮುಚ್ಚುಮರೆಯಿಲ್ಲದ ಬಿಚ್ಚಿಡುವ ವಸ್ತುನಿಷ್ಠ ಹಾಡುಗಳೇ ವಾದಿರಾಜರ ಕನ್ನಡ ಸಾಹಿತ್ಯವಾಯಿತು ಗಾಢಚಿಂತನೆಯ ಮೂಲಕ ಆಧ್ಯಾತ್ಮಿಕ ಸತ್ಯಗಳು ಅಲೌಕಿಕ ತತ್ತ್ವಗಳು ವಾದಿ ರಾಜರ ಗರಡಿಯಲ್ಲಿ ಪ್ರಭಾವಪೂರ್ಣ ನುಡಿಕಿಡಿಗಳಾಗಿ ಮೂಡಿ ಬಂದವು

ವಾದಿರಾಜರ ಕನ್ನಡ ಹಾಡುಗಳಲ್ಲಿ ಅರ್ಥ. ಭಾವಗಳು ಶಕ್ತಿಯುತವಾಗಿ ಸ್ಪಂದಿಸುತ್ತಾ ನಾದಕ್ರಿಯೆಯನ್ನು ನಡೆಸುತ್ತವೆ ಅವರ ಅನುಭವನಿಷ್ಠ ಹರಹಿನಲ್ಲಿ ಕಾವ್ಯ ಮಡುಗಟ್ಟಿಕೊಂಡು [illegible]

ಅರ್ಥ ಪರಿಸರಕ್ಕೆ ಹೊಸದೊಂದು ರೂಪ ಕಲ್ಪನೆಯನ್ನೇ ನೀಡುತ್ತದೆ ವಾದಿರಾಜರು ಅನುಭವಿಗಳು ಅನುಭಾವಿಗಳು. ರಸದ್ರಷ್ಟಾರರು ಅವರ ಒಂದೊಂದುಅನುಭವವೂ ಗಾನವಾಗಿ, ತಾನವಾಗಿ ಸ್ವರ ಸಂಚಾರದಲ್ಲಿ ಲೀನ ವಾಗುತ್ತದೆ.

ಕನ್ನಡ ಹಾಗೂ ಸಂಸ್ಕೃತ ಭಾಷೆಯಲ್ಲಿ ಉಭಯ ಭಾಷಾ ವೈನತೇಯ ರಾಗಿದ್ದ ವಾದಿರಾಜರು ತಮ್ಮ ಹೆಸರು ಅನ್ವರ್ಥವೆನಿಸುವಂತೆ ವಾದ ವೈಖರಿ ಯಲ್ಲೂ ವಾಗ್ವಿಲಾಸದಲ್ಲೂ ಅಪ್ರತಿಮರೆನಿಸಿದ್ದರು ಭಗವದನುಗ್ರಹದ ಗೌರೀಶಂಕರದಲ್ಲಿದ್ದ ವಾದಿರಾಜರಿಗೆ ತಿರುಪತಿಯ ಶ್ರೀನಿವಾಸನನ್ನು ಕಂಡ ದಿನದ ಅಮೃತಘಳಿಗೆ 'ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ, ಹಿಂದಿನ ಪಾಪವು ಬೆಂದು ಹೋಯಿತು ಎನಗೆ, ಮುಂದಿನ ಮುಕುತಿಯು ದೊರಕಿತು ಎನಗೆ ಎನ್ನ ತಂದೆ ಹಯವದನನೊಲವಿಂದ" ಎಂದು ತಮ್ಮ ವೆಂಕಟೇಶದರ್ಶನದ ಸುಳಾದಿಯಲ್ಲಿ ಘೋಷಿಸಿದರು ಉಡುಪಿಯ ಕೃಷ್ಣನನ್ನು ಕಂಡಾಗಲಂತೂ "ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯ ಮಂಗಳ ಮೂರ್ತಿಯ ಕಂಡು ಬದುಕಿದೆ ಎಂದು ನಾನು ಕರುಣಿಸೋ ಎನ್ನೊಡೆಯನೇ, ಇನ್ನು ಎನ್ನ ಬಂಧ ತೀರಿತು, ಇನ್ನು ಕ್ಲೇಶವು ಹೋಯಿತು ಇನ್ನು ಅನ್ಯರ ಭಜಿಸಲ್ಯಾಕೆ ಮನ್ನಿಸೋ ಹಯವದನನೇ" ಎಂದು ಬಂಧನದಿಂದ ಹೊರಬಂದ ಪುನೀತ ಜೀವದಂತೆ ಆನಂದ ಲಹರಿಯನ್ನು ಹರಿಸಿದರು ಭಗವಂತನ ದಶಾವತಾರ ವನ್ನು ವರ್ಣಿಸುವುದಂತೂ ವಾದಿರಾಜರಿಗೆ ಪರಮ ಸಂತೋಷದ ಸಾಧನೆ ಅವರು ರಚಿಸಿರುವಷ್ಟು ವರ್ಣರಂಜಿತವಾಗಿ, ವೈವಿಧ್ಯ ಪೂರ್ಣವಾಗಿ ದಶಾವ ತಾರದ ವರ್ಣನೆಯನ್ನು ಮಾಡಿರುವ ಸಾಹಿತಿಗಳು ಅಪರೂಪ "ಮುತ್ತೈದ ನಾರಿಯರು ಮುತ್ತಿನಾರತಿ ಮಾಡಿ, ಹತ್ತವತಾರಿ ಹಯವದನ, ಹತ್ತವತಾರಿ ಹಯವದನನ ಹಾಡುತ ಚಿತ್ರದಾರತಿಯ ಬೆಳಗಿರೇ' ಎನ್ನುವ ವಾದಿರಾಜರು ಭಕ್ತಿ ಸಾಹಿತ್ಯದ ರಾಜಮಾರ್ಗದಲ್ಲಿ ದಶಾವತಾರದ ವೈಭವಯುತ ಮೆರವಣಿಗೆ ಯನ್ನೇ ಹೊರಡಿಸಿದ್ದಾರೆ

ವಾದಿರಾಜರು ಒಂದೊಂದು ಮಂಗಳ ಸಂದರ್ಭಕ್ಕೂ ಒಂದೊಂದು ಹಾಡಿನ ಸಮರ್ಪಣೆಯನ್ನು ಹಾಡಿ ಅದನ್ನು ವ್ಯಾಪಕ ಪ್ರಚಾರದಲ್ಲಿ ತರುವ ವ್ಯವಸ್ಥೆಯನ್ನು ಏರ್ಪಡಿಸಿದ್ದರು. ಬಾಗಿಲು ಕಟ್ಟುವ ಹಾಡಿನಲ್ಲಿ ಭಗವಂತ

ಬಾಗಿಲಿಂದಾಚೆಗ ನಿಂತಿದ್ದಾನೆ ಭಾಮೆ ಒಳಗಿದ್ದಾಳೆ, ಆದರೆ ಬಾಗಿಲು ತೆರೆಯುತ್ತಿಲ್ಲ 'ಯಾರು ಎಂದ' ಅವಳು ಕೇಳುತ್ತಿರುವಂತೆಯೆ ಭಗವಂತ ಬಂದಿರುವುದು ತಾನೆಂದು ಹೇಳುತ್ತಾ ಬಾಗಿಲು ತಟ್ಟುತ್ತಿದ್ದಾನೆ

"ನೀರೊಳು ಮುಳುಗಿ ನಿಗಮಚೋರನ ಗೆದ್ದ ನೀರಜಾಕ್ಷನೆ ಭಾಮೆ" ಅದಕ್ಕೆ ಭಾಮ "ನಾರುವ ಮೈಯನ್ನು ಎನ್ನಲ್ಲಿ ತೋರದೆ ನಾರು ನಾರು ನೀ ದೂರ" ಎಂದು ಛೇಡಿಸುತ್ತಾಳೆ ತುಂಬಾ ಭಾರ ಹೊತ್ತಿದ್ದೇನೆ ಬೇಗ ಬಾಗಿಲು ತೆಗಿ ಎನ್ನುವಂತೆ "ಮಂದರಗಿರಿಯನು ಬೆನ್ನಲಿ ಪೊತ್ತಂದ ಇಂದಿರೆಯರಸನೆ ಭಾಮ ಎನ್ನುವ ಭಗವಂತನಿಗ "ಇಂದು ನಿನಗ ತಕ್ಕ ಭಾರಗಳಿಲ್ಲವೋ ಸಿಂಧುವಿನೊಳಗ ನೀ ಪೋಗೈ' ಎನ್ನುವ ಭಾಮ ಭಗವಂತನ ದಶಾವತಾರಗಳನ್ನು ಈ ಸಂವಾದ ರೂಪದಲ್ಲಿ ಹಿಗ್ಗಿ ಹಿಗ್ಗಿ ಹೇಳಿಸುತ್ತಾ ಕಡೆಗೆ ಭಗವಂತನೆ 'ಸರ್ವ ಪ್ರಾಣಿಗಳ ಉದರ ದೊಳಿಂಬಿಟ್ಟು ವರಧಿಯೊಳ್ ಮಲಗಿದೆ ಭಾಮೆ" ಎನ್ನುತ್ತಾ ಸಮುದ್ರದ ಕಡೆಗ ಬೆಟ್ಟು ಹಾಕುವಂತೆ ನಾಟಕ ಮಾಡಿದಾಗ 'ದೊರೆ ಹಯವದನನ ಚರಣಕ್ಕೆ ಎರಗುತಾ ತೆರೆದಳು ಬಾಗಿಲು ಭಾಮಾ, ಆಗ ತೆರೆದಳು ಬಾಗಿಲ ಭಾಮೆ"

ವಾದಿರಾಜರು ನಿರ್ಮಿಸಿರುವ ದಂಪತಿಯರ ಉರುಟಣೆಯು ಪ್ರೌಢ ತುಂಬಾ ಆಪ್ತವಾದ, ಗಾಢವಾದ ಅಭಿವ್ಯಕ್ತಿಯಾಗಿದ್ದು ದಶಾವತಾರದ ಇಟ್ಟಿಗೆಯನ್ನೇ ಇಲ್ಲೂ ಬಳಸಿದ್ದಾರೆ 'ಲಕ್ಷುಮಿ ರಮಣಗ ಮಾಡಿದಳು ಉರುಟಣೆ ಇಳೆಯೊಳಗತಿ ಜಾಣೆ ಸುಂದರ ಫಣಿವೇಣಿ ಲಕ್ಷ್ಮಿ ಉರುಟಣೆ ಮಾಡಿದ ಬಗೆ ನೋಡಿ "ಕೇಸರಿಯಂದದ ಮುಖದ ಮೃಕ್ಷ ಕಣ್ಣ್ಯವನಿಗ ನ್ವಾಕ್ಷ ಮುಖದ ತೋರು ಕುಂಕುಮ ಹಚ್ಚುವೆನು ಎನ್ನುತ್ತಲೇ ಬಲಿಯ ದಾನವ ಬೇಡಿ ಇಳೆಯ ಈರಡಿ ಮಾಡಿ ಅಳಿದಡಿಗಳ ತೋರ್ಮೈ ಅರಿಶಿನ ಹಚ್ಚುವೆನು. ದುಷ್ಟ ಕ್ಷತ್ರಿಯರ ಕೊರಳನ್ನು ತರಿದ ಹರಿಯೇ. ನಿನ್ನ ಕೊರಳಿಗೆ ಗಂಧ ಹಚ್ಚುವೆನು ದಶರಥನಲಿ ಜನಿಸಿ ದಶಮುಖನ ಸಂಹರಿಸಿ ಶಶಿಮುಖಿಯ ತಂದವನೆ ಕುಸುಮ ಮುಡಿಸುವೆನು, ಹದಿನಾರು ಸಾವಿರ ಸುದತಿಯರನಾಳಿದ ಮದುಮಕರನೆ ನಿನಗ ವೀಳ್ಯವ ಕೊಡುವೆನು, ವಸನರಹಿತನಾಗಿ ವಸುಧೆಯ ತಿರುಗಿದ ಬಿಸಜನಾಭನೆ ನಿನಗೆ ವಸನವ ಹೊದಿಸುವೆನು, ಭರತುರಗವನೇರಿ ಕಲಿಯ ಸಂಹರಿಸುವ ಸಿರಿಚೆಲುವ

ವರನಿಗೆ ಆರತಿಯೆತ್ತುವೆನು' ಎನ್ನುವ ಈ ಉರುಟಣೆಯ ಹಾಡು ಇಂದಿಗೂ ಹಲವು ಮನೆಗಳಲ್ಲಿ ಕೇಳುವ ಸ್ವಚ್ಛಕೃತಿಯಾಗಿ ಉಳಿದುಕೊಂಡಿದೆ. "ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈವರೆಗೆ ಶೃಂಗಾರ ಪುರುಷರು ಏನುಮುಂದಿ ಇರಲು" ಎನ್ನುತ್ತಾ ಸಮುದ್ರರಾಜನನ್ನು ದೂಷಿಸುವ ನೆಪದಲ್ಲಿ ಭಗವಂತನ ದಶಾವತಾರವನ್ನು ನಿಂದಾಸ್ತುತಿ ಮಾಡಿರುವ ವಾದಿರಾಜರ ಶೈಲಿ ಅನನ್ಯ. ಯಶೋದೆ ಹಾಗೂ ಬಾಲಗೋಪಾಲರ ನಡುವಿನ ಸಂಭಾಷಣೆಯ ಕೃತಿಯೂ ಕೃಷ್ಣನ ಲೂಟಿಗ ಗೋವಿಂದನ ಚಾಡಿಗೆ, ಬೆದರಿದ ಹಸುಕರುಗಳಿಗೆ, ಬಲರಾಮನ ಸಿಟ್ಟಿಗ, ಕಡಗೆ ಯಶೋದೆ ಬಾರೆಂದು ಯಶೋದೆ ಕರೆದಳು ಬಿಗಿದಪ್ಪಿ ಧೀರ ದಯವಾನನ್ನ' ಎನ್ನುತ್ತಾ ಮುದ್ದಿಸುವ ವಾತ್ಸಲ್ಯಕ್ಕೆ ಸ್ಪಷ್ಟ ಸಾಕ್ಷಿಯಾಗುತ್ತದೆ 'ಏನು ಸುಕೃತವ ಮಾಡಿದಳೋ ಯಶೋದ ಪ್ರಸಿದ್ಧಿ ಕೃಷ್ಣನ್ನ ಕರೆದೆತ್ತಿ ಮುದ್ದಿಸಲೆಂತೆ' ಎನ್ನುವ ಗೀತವಂತೂ ಯಶೋದೆಯ ಅಂತಃಕರಣಕ್ಕೆ ಕನ್ನಡಿಯಾಗುತ್ತದೆ ಮಾತೃವಾತ್ಸಲ್ಯದ ಉತ್ತುಂಗವನ್ನು ವಾದಿರಾಜರು ಕಂಡಿದ್ದಾರೆ

ವಾದಿರಾಜರು ಇಡೀ ನಾಡಿನ ಸಾರ್ವಭೌಮರೆಲ್ಲರಿಂದಲೂ ವಂದಿತರಾಗಿದ್ದರೂ ಅವರ ಸಮರ್ಪಣಾ ವಿಧಾನವೇ ಆಶ್ಚರ್ಯಕರ "ಮುಂದು ಹಿಂದು ಎಂದೆಂದಿಗೂ ಗೋವಿಂದನೆ ಎನಗ ಬಂಧು ಇಂದು ಇವರು ಇಲ್ಲ, ಅಂದಿಗ ಇದ್ದರು ಇಲ್ಲ" ಎನ್ನುವ ವಾದಿರಾಜರು ದಾಸನಾಗುವ ದಾರಿಯ ಕಡುಕಷ್ಟವನ್ನು ನಿರೂಪಿಸುತ್ತಾರೆ 'ಆರಿಗ ಆರೋ ನಿನ್ನ ಉಳಿದು ಪೊರೆವರ ಕಾಣೆ, ಶೂರ ಮಾರಜನಕ ಅಕ್ರೂರವರದ ದೊರೆಯೇ, ಸತಿಸುತರು ಪಿತರೇನೋ ಮತಿ ಭ್ರಾಂತಿ ಪಡಿಸುವರೋ ಗತಿ ಯಾರನು ಕಾಣೆ ಗರುಡವಾಹನರಂಗ, ಆಶಾಪಾಶದಿ ಸಿಲುಕಿ ಘಾಸಿಪಟ್ಟೆನೋ ಬಹಳ ಪಾಮರನೆ ನಿನ್ನ ದಾಸನಂದೆನಿಸೆನ್ನ' ಎನ್ನುವಲ್ಲಿ ದಾಸ್ಯಭಾವದ ಸಮ್ಯಗ್ದರ್ಶನವಾಗುತ್ತದೆ

ವಾದಿರಾಜರ ಕನ್ನಡ ಹಾಡುಗಳು ಸಮಾಜದ ವಿವಿಧ ಸಮಸ್ಯೆಗಳನ್ನು ಸ್ಪಂದಿಸಿ, ಸಾಮಾಜಿಕ ಆಡಂಬರ. ಡಂಭಾಚಾರ, ಶೋಷಣೆ, ಕುಲಗಳ ಬಗ್ಗೆ ಸ್ಪಷ್ಟ ಅಭಿಪ್ರಾಯವನ್ನು ಓದುಗರ ಮುಂದಿಟ್ಟಿವೆ "ಹಣವೇ ನಿನ್ನಯ ಗುಣ ಏನು ಬಣ್ಣಿಸಲೋ ಹಣವಿಲ್ಲದವನೊಬ್ಬ ಹೆಣವು ಸರಿ ಕಂಡ್ಯಾ" ಎನ್ನುವ

ವಾದಿರಾಜರು ಹಣ ಹೇಗೆ ಸಾಮಾಜಿಕ ವ್ಯವಸ್ಥೆಯನ್ನು ನೈತಿಕಸ್ಥೈರ್ಯ
ವನ್ನು ಏರಿಳಿಗೊಳಿಸುತ್ತದೆಂಬುದನ್ನು ನೇರವಾಗಿ ಹೇಳುತ್ತಾರೆ "ಹಣದ
ಬಲವೊಂದಿದ್ದರೆ ಅಯೋಗ್ಯನು ಯೋಗ್ಯನಾಗಿ, ಅದಿಲ್ಲದಿದ್ದರೆ ಯೋಗ್ಯನು
ಅಯೋಗ್ಯನಾಗಿ ತೋರುವನು ಹಣವಿದ್ದರೆ ಹೊನ್ನು-ಹೆಣ್ಣುಗಳ ಲೋಲುಪ
ನಾಗುವನು ಮಂಗನೂ ಅನಂಗನೆನಿಸುವನು. ಇಂಥವನು ಮಂದಮತಿ
ಯಾಗಿದ್ದರೂ, ಕುರೂಪನಾಗಿದ್ದರೂ ಕನ್ಯಾಪಿತೃಗಳು ತಮ್ಮ ಮಗಳನ್ನು ನೀಡಿ
ಮದುವೆ ಮಾಡಲು ಮುಂದಾಗುವರು ಪರಮ ಅಜ್ಞಾನಿಯೇ ಧನಬಲದಿಂದ
ಪ್ರಾಜ್ಞ ಜ್ಞಾನಿ ಎನಿಸಿಕೊಳ್ಳುವನು ಅರಿಯದ ಮಂದ ಅರಿತವನಂತೆ ಕಂಡು
ಸಿರಿವಂತನಾದವನ ನ್ಯೂನತೆಗಳನ್ನು ಮರೆಸುವ ಸಾಧನವಾಗಿ ಹಣ. ಅವ್ಯವಸ್ಥೆಯ
ಆಗರವಾಗಿದೆ ಎಂದಿದ್ದಾರೆ ಸದಾ ಮನೆ-ಮಡದಿ-ಮಕ್ಕಳು-ಮನರಂಜನೆ
ಎಂದು ವಿಲಿವಿಲಿ ಒದ್ದಾಡುತ್ತಿರುವ ಮನುಷ್ಯ ಅಪಾರ ಸಂಸಾರದ ಬಲೆಯೊಳಗೆ
ಸಿಕ್ಕಿಬಿದ್ದಿದ್ದಾನೆ. ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಕಂಡು ಸಂಸಾರದ ಗೂಡಿ
ಯೊಳಗೆ ಬರುವ ವ್ಯಕ್ತಿಗೆ ಹಿಡಿಯುವುದಕ್ಕೆ ಆಧಾರವಿಲ್ಲ, ಕಡೆ ಹಾಯಿಸುವರಿಲ್ಲ.
ಸದಾ ಕಷ್ಟಪರಂಪರೆಗಳು, ಕಣ್ಣೀರು ತಪ್ಪಲಿಲ್ಲ. ಸುಖಪಡಲಿಲ್ಲ ಊಟ
ಮಾಡಲು ಹೋಗಿ ಬಾಯನ್ನೇ ಮರೆತಂತಾಯಿತಲ್ಲ ಬಡತನವು ಬಿಡಲಿಲ್ಲ,
ಭಂಗಪಟ್ಟೆನಲ್ಲ ಗರುಡಸರ್ಪನ ಸ್ನೇಹವಾದಂತಾಯಿತಲ್ಲಾ ಎಂದು ಮಮ್ಮಲ
ಮರುಗುವ ವ್ಯಕ್ತಿಗೆ ವಾದಿರಾಜರು ನರ ಜೀವನದ ಆಕಾಂಕ್ಷೆಗಳಲ್ಲಿಯೇ
ಬದುಕನ್ನು ಪರ್ಯವಸಾನ ಮಾಡಿಕೊಳ್ಳದೆ ಶಾಶ್ವತ ಸುಖಕ್ಕಾಗಿ ಪ್ರಯತ್ನ
ಶೀಲನಾಗಿ ಆ ಸುಖಕ್ಕಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು
ತಿಳಿಸುತ್ತಾರೆ. ಈ ದೇಹ ನೆರೆಮನೆ. ಬಹುಕಾಲದಿಂದ ಇಲ್ಲಿ ನರಳುತ್ತಿರುವ
ಮನುಷ್ಯರಿಗೆ ಮಕ್ಕಳು ಅಳುವಾಗ ಮಡದಿಯರು ಜರಿವಾಗ, ಭಿಕ್ಷುಕರು
ಬಂದು ಬೈಯುವಾಗ ಎತ್ತಣ ಸುಖ ರೋಗರುಜಿನಗಳಿಂದ ದೇಹ ಕುಂದಿದಾಗ
ಕಾಲನ ಭಟರು ಬಂದು ಕವಿದು ನಾನಾಗಿ ನಿಂತಾಗ ಬದುಕಿನ ನಾಲಿಗೆ ನಾದ
ಎಲ್ಲಿಂದ ಬರಲು ಸಾಧ್ಯ ?

ಸಮಾಜಘಾತುಕ ಬಂಡಾಡಿ ಗುಂಡರಿಗೆ ವಾದಿರಾಜರು ಛೀಮಾರಿ ಹಾಕಿ
"ದಾನವಿಲ್ಲ ಧರ್ಮವಿಲ್ಲ ಜ್ಞಾನವಿಲ್ಲ, ಏನು ಹೇಳಿದರೇನು. ವಿಷಯಾಸಕ್ತಿಯಿಂದ

ಪವನಿಗೆ . ಕಂಡಕಂಡವರ ಅನ್ನಕ್ಕೆ ಸಿಲುಕಿ ಅನುಗಾಲ ಭಂಡತನದಲಿ ಕಾಲ ಕಳೆಯುತ ಕಂಡಕಂಡವಿ ಒರುವ ಔತಣಕೆ ಮೈಯುಬ್ಬಿ ಉಂಡು ಎನಗಿಂತ ಅದಿಕ ಯೋಗ್ಯನಿಲ್ಲವೆಂದು" ಮೆರೆಯುವವರಿಗ ವಾದಿರಾಜರು ಬದುಕಿನಲ್ಲಿ ಕ್ರಿಯಾಶೀಲರಾಗಲು ಕರೆ ನೀಡುತ್ತಾರೆ

ಸಮಾಜದಲ್ಲಿ ಶೋಷಣೆ ಹೆಚ್ಚಿ ದೀನದಲಿತರ ಬದುಕು ದುರ್ಭರವಾಗಿ ದಾಸ್ಯದ ಹುಳುಗಳಾಗಿ ವಿಲವಿಲನೆ ಒದ್ದಾಡುವ ಜನರನ್ನು ಕಂಡು "ಅನ್ನದಾನೆಗೆ ಪರರ ಮನೆಯ ಬಾಗಿಲ ಕಾಯ್ದು ಅನೇಕ ಒಗೆಯಿಂದ ನೊಂದೆನೋ ಹರಿಯೇ, ಧರೆಯೊಳಗ ಒಹು ದೀನನಾಗಿ ಬಾಳುವೆನಯ್ಯಾ ನರರಿಗೆ ಬಾಯಿ ತೆರೆದು ನಿತ್ಯ ಹಗಲಿರುಳೆನ್ನದೆ ಮನೆಮನೆಯ ತಿರುಗುವನೋ ಕರುಣಬಾರದು ಕಠಿಣ ಜನರಿಗೆ. ಗರುವದಿಂದಲಿ. ಗಜದಂತಿಪ್ಪರು. ಅರಸುಗಳು ನಾವೆಂದು ಅಹಂಕಾರದಲಿ ಮೂರ್ಖರಾಗಿ, ಕರವ ಮುಗಿವರೆ ಮುಗಿಯರು, ದುರುಳ ಜನರ ಸೇವೆ ವ್ಯರ್ಥವ್ಹೋ ದಾವೇದ ಜಿಲುವ ಹಯವದನ ಮಹಾರಾಜ ರಾಜ" ಎಂದು ಹೇಳಿ ಹುಲುಮಾ ನವರ ದಾಸ್ಯಕ್ಕಿಂತ ಹಯವದನ ಮಹಾರಾಜನ ದಾಸ್ಯವೇ ಹೆಚ್ಚು ಚೆನ್ನು ಎಂಬುವನ್ನು ತಿಳಿಸಿಕೊಡುತ್ತಾರೆ

ಕುಲಜಾತಿಗಳ ಶ್ರೇಷ್ಠತೆಯನ್ನೇ ಬಂಡವಾಳವನ್ನಾಗಿಟ್ಟುಕೊಂಡು ದಾಂಧಲೆ ಮಾಡುವ ವರ್ಗವನ್ನು ಕಂಡು ವಾದಿರಾಜರು ಮಾನವನ ಗುಣಕ್ಕೆ ಬೆಲೆ ಕೊಡಬೇಕೇ ಹೊರತು ಕುಲವೈಭವಗಳಿಗಲ್ಲ ಎಂಬ ಸಂದೇಶವನ್ನು ನೀಡು ತ್ತಾರೆ "ಕುಲಮದ ವೈಭವದ ಮದ ವಿದ್ಯಾಮದಗಳನುಳಿದು ಹರಿದಾಸರ ಮೊರೆ ಪೊಕ್ಕು ಸುಖಿಯಾಗು. ಚಿಪ್ಪಿನೊಳ್ಪುಟ್ಟಿದ್ದ ಮುತ್ತಿನ ಮಹಿಮೆಗೆ ತಪ್ಪೇನೋ ಮರುಳೆ ಮಾನವ ಹೇಳಿಯಾ, ಸರ್ಪಕಲ್ಪನ ಪೂಜೆಗುಚಿತನಾದರೆ ಆವನ ಇಷ್ಟತ್ತೊಂದು ಕುಲನುಕುಲ ನೋಡಾ ಎಂದು ಹೇಳುತ್ತಾ ಹುಳುಗಳು ಕ್ರಿಮಿಕೀಟಗಳು ಹುಟ್ಟುವ ಚಿಪ್ಪಿನಲ್ಲಿ ಹುಟ್ಟುವ ಮುತ್ತು ತನ್ನ ಗುಣದಿಂದ ಶ್ರೇಷ್ಠತೆಯನ್ನು ಪಡೆದಿದೆಯೇ ಹೊರತು ಹುಟ್ಟಿನಿಂದಲ್ಲ ಎಂದು ಮಾರ್ಮಿಕ ವಾಗಿ ತಿಳಿಸುತ್ತಾರೆ

ಡಾಂಭಿಕರನ್ನು, ಆಷಾಢಭೂತಿಗಳನ್ನು, ಉದರ ವೈರಾಗ್ಯದ ಸಿನ್ನೀಮ

ರನ್ನು ವಾದಿರಾಜರು ಸ್ಪಷ್ಟ ಮಾತುಗಳಲ್ಲಿ ತಮ್ಮ ಬದುಕಿನ ಮೇಲೆ ಆರೋಪಿಸಿ ಕೊಂಡು ಬಯಲಿಗೆಳೆಯುತ್ತಾರೆ 'ಬಿಡಿ ಮರುಳಾದೆವಯ್ಯಾ ಬರಿದ ಮಾತ್ರಕ್ಕೆ ನಡೆಯೊಳು ಪಾಪಿನಾಪ, ವೇದಶಾಸ್ತ್ರ ಉಪನ್ಯಾಸ ಮಾಡುವ, ಅವರು ಕೊಡಲು ಕೊಂಡಾಡುವೆ, ಆದರಿಸದಿದ್ದವರ ಜರಿದು ಬರುವೆ ಖಿನ್ನನಾಗಿ, ಸ್ನಾನಮೌನಂಗಳನು ಮಾಡುವೆ ಸಕಲಜನರ ಮುಂದ ಮಾನಸವಿಲ್ಲದಾಗಲೇ ಮೌನವಿಲ್ಲ ಮಂತ್ರವಿಲ್ಲ, ಜ್ಞಾನದ ವೇಳುವ ಮೋನ ಮಾಡಿಕೊಂಡು ಹೊಟ್ಟೆ ಹೊರೆಯುವ, ನಿನ್ನ ನಾ ಮರವೆ "ಪರರ ಅಂಗನೆಯರ ಚೆಲುವಿಕೆಯ ಕಂಡು ಕಣ್ಣಿಂದ ನೋಡಿ ಪಾಡಿ ಎರಗಿ ಮನ ಅವರಲ್ಲಿ ಏಕಾಂತದಲಿ ಕೂಡಿ, ಕರವಿ ನಸ್ನೆಯ ಮಾಡಿ ಕೂಡಿ ಹೊರಗೆ ಗುಣವಂತನೆನಿಸಿ, ಧರೆಯೊಳಗೆ ವಾಮನ ಬುದ್ಧಿಯಿಂದ ಸಂಚರಿಸಿ ನಿನ್ನನು ಮರೆದೆ ಎನ್ನುತ್ತ ವಿಷಯಲೋಲುಪತೆ ಹಾಗೂ ಬಹಿರಂಗದ ಬೂಟಾಟಿಕೆಗಳನ್ನು ನೇರಮಾತುಗಳಲ್ಲಿ ಬಿಚ್ಚಿಟ್ಟಿದ್ದಾರೆ ಹಣದ ಆಸೆಗಾಗಿ ದೇಹವನ್ನೇ ಮಾರುವವರನ್ನು ವಾದಿರಾಜರು ವೇಸರಗತ್ತೆಗೆ ಹೋಲಿಸುತ್ತಾರೆ "ಹಾಸುಮಂಚವ ಬಯಸಿ ಬಯಸಿ ವೇಸರಗತ್ತೆಯಂತೆ ಪರರಿಗೇ ಶರೀರವ ಮಾರಬೇಡ. ಕಾಸೆಯ ಕಟ್ಟಿ ಕುಣಿಯಬೇಡ, ವೇಷ ವೇಶಕೆ ಹಾರಬೇಡ ನಾಶವಾದ ಮೇಲ ಕ್ಲೇಶ ಉಂಟೇ ಅಭ್ಯಾಸಕೆ ನೀನೊಳಗಾಗದೆ ವೇಷವಾಯಿ ಹಯವದನನ ನೆನೆ ನೆನೇ"

ವ್ಯರ್ಥವಾಗಿ ಕಾಲಹರಣ ಮಾಡುವ ಜನರನ್ನು ಕಂಡು ಅಮೂಲ್ಯವಾದ ವೇಳೆಯ ಮಹತ್ವವನ್ನು ಅರ್ಥಮಾಡಿಕೊಳ್ಳಿರೆಂದು ತಿಳಿಯಹೇಳುತ್ತಾರೆ "ಹೋಗುತಿದೆ ಹೊತ್ತು ಬರಿದೆ ವ್ಯರ್ಥವಾಗಿ ಕೆಲಹೊತ್ತು ಚದುರಂಗಪಗಡೆ ಆಟಗಳಿಂದ ಕೆಲಹೊತ್ತು ಹಸಿವು ನಿದ್ರೆಗಳಿಂದ ಕೆಲಹೊತ್ತು ಕಾಕಪೋಕರ ಕತೆಗಳಿಂದ ಕೆಲ ಹೊತ್ತು ಪರನಿಂದೆ ಪರವಾರ್ತೆಗಳಿಂದ ಕಾಲವು ಕಡೆಯಾಗಿ ಹರಿ ನಿಮ್ಮ ಚರಣಸೇವೆಯಿಲ್ಲದೆ ಹೋಯ್ತು ಬಂಜೆಯಾಗಿ, ಪಾಲಿಸಿ ಹೋಗುತಿದೆ ಈ ವಿಷಧಿಹೊತ್ತು ಬೇಗನೇ ಪಾಲಿಸಿ ದಯಮಾಡೋ ಸಿರಿಹಯವದನ

"ಸಜ್ಜನರೆಂದರೆ ಹೇಗಿರಬೇಕು ಎಂದು ತಿಳಿಸುವ ವಾದಿರಾಜರು "ನಾನು ಸಜ್ಜನನಾದೊಡೆ ಹೀನ ವಿಷಯಂಗಳಿಗೆ ಎರಗುವೆನೇನಯ್ಯ' ಎಂದು ಹೇಳಿ ಸಜ್ಜನರು ಹೀನಕಾರ್ಯ ಮಾಡಬಾರದು. ಪರಮಾತ್ಮನಲ್ಲಿಯೇ ಮನವನ್ನಿಡ

ಬೇಕು, ಉತ್ತಮರ ಸಂಗವನ್ನು ಮಾಡಬೇಕು, ತತ್ವವಿಚಾರವನ್ನು ಮಾಡಬೇಕು, ಉನ್ಮತ್ತರ ಸಂಗ ಬಿಡಬೇಕು ಪರನಿಂದೆ ಮಾಡಬಾರದು, ಗುರುಹಿರಿಯರನ್ನು ಆದರಿಸಬೇಕು, ಗುರುವೇ ಪರಮದೈವವೆಂದು ತಿಳಿಯಬೇಕು ಪರರ ಧನಕಾದಿ ಗಳನ್ನು ಬಯಸಬಾರದು, ಹೀನಶರೀರದ ಪೋಷಣೆಯೇ ಜೀವನದ ಪರಮ ಉದ್ದಿಶ್ಯವೆಂದು ತಿಳಿಯಬಾರದು, ಭಕ್ತರನ್ನು ಕಾಯುವ ಹಯವದನನನ್ನು ಮಾತ್ರ ಎಂದಿಗೂ ಮರೆಯಬಾರದು" ಎಂಬ ಪ್ರಣಾಳಿಕೆಯನ್ನೇ ಹೊರಡಿಸು ತ್ತಾರ

ಸಜ್ಜನರ ಲಕ್ಷಣಗಳನ್ನು ತಿಳಿಸುವ ವಾದಿರಾಜರು ಹಾಗೆಯೇ ಆಚಾರ ಹೀನನ ಜೀವನವನ್ನು ಚಿತ್ರಿಸಿ ಅಂತಹ ಹೇಯ ಬದುಕನ್ನು ಯಾರೂ ಬಯಸ ಬಾರದು ಎಂದು ಎಚ್ಚರಿಸುತ್ತಾರೆ ಅನಾಚಾರಿಯಾದವನು ಗುರುಹಿರಿಯರನ್ನು ಆದರಿಸುವುದಿಲ್ಲ ಹಣದ ಮದದಿಂದ, ದುರಾಸೆಯಿಂದ ದೇವರನ್ನು ಮರೆಯು ವನು ಪರಸ್ತ್ರೀ ವಶನಾಗಿ ದುರ್ಗತಿ ಹೊಂದುವನು ಕಾಮಕ್ರೋಧಗಳ ವಶವಾಗುವನು. ಮಾಡಿದ ಪಾಪಗಳಿಂದ ಹತ್ತು ಹಲವು ಜನ್ಮಗಳವರೆಗೆ ಬಾಯಾರಿ ತೊಳಲಿ ಬಳಲುವನು ಉದರ ಪೋಷಣೆಗಾಗಿ ಹುಚ್ಚು ನಾಯಿಯಂತೆ ಹಲವು ಮನೆಗಳಿಗೆ ತಿರುಗುವನು ನೀರಿನ ಗುಳ್ಳೆಯಂತೆ ನಶ್ವರ ವಾದ ಈ ಶರೀರವನ್ನೇ ಶಾಶ್ವತ ಆಶ್ರಯವೆಂದು ತಿಳಿಯುವನು.

ವಾದಿರಾಜರು ಮನದ ಡೊಂಕನ್ನು ತಿದ್ದಿ ಉತ್ತಮ ಮಾರ್ಗದರ್ಶನ ನೀಡೆಂದು ಹಯವದನನಲ್ಲಿ ಮೊರೆಯಿಡುವರು "ಎನ್ನ ಮನದ ಡೊಂಕ ತಿದ್ದಯ್ಯ ಗೋಪಾಲಕೃಷ್ಣ, ಬನ್ನಪಡಲಾರೆ ಭವಾಬ್ಧಿಯನ್ನು ದಾಟಿಸೋ ಅಪಾರ ಮಹಿಮ. ಉದಯವಾದರೆ ಊಟದ ಚಿಂತೆ, ಉಂಡಮೇಲ ಭೋಗದ ಚಿಂತೆ, ಆಮೇಲೆ ಹದಿನಾಲ್ಕು ಲೋಕಗಳನ್ನು ಆಳುವ ಚಿಂತೆ, ಸುಖವು ಬಂದರೆ ನಾನೇ ಸಮರ್ಥ, ದುಃಖವು ಬಂದರೆ ಹರಿಯೇ ಕಾರಣ, ಹಣವು ಬಂದರೆ ನಾನೇ ದನಿಕ, ಸಿಕ್ಕಿಬಿದ್ದರೆ ಹರಿಯ ವ್ಯಾಪಾರ, ತಿಳಿದೂ ತಿಳಿದೂ ಪತಂಗದ ಹುಳುವು ಕಿಚ್ಚಿನಲ್ಲಿ ಬೀಳುವ ಹಾಗೆ ಬಿದ್ದು ಕಾಲ ಕಳೆದೆ ಮೂಕನಂತೆ ಮುದ್ದು ಹಯವದನ" ಎಂಬ ನೀತಿಯ ಮಾತುಗಳನ್ನು ಹೇಳಿದ್ದಾರೆ. ಸಿರಿಬಂದ ಕಾಲಕೆ ಮೆರೆಯುವುದು ಸರಿಯಲ್ಲವೆನ್ನುವ ವಾದಿರಾಜರು ತಾಳುವಿಕೆಗಿಂತ ತಪವು

ಇನ್ನಿಲ್ಲ ಎಂದಿದ್ದಾರೆ "ದುಷ್ಟ ಜನರ ಮಾತುಗಳನ್ನು ತಾಳು, ಕಷ್ಟ ಬಂದರೆ ತಾಳು, ಸಿಟ್ಟು ಸುಯು ಹಲ ಬಡುವವರೆಗೆ ತಾಳು, ಉಕ್ಕೋ ಹಾಲಿಗೆ ನೀರು ಇಕ್ಕಿದಂದದಿ ತಾಳು, ಪಕ್ಷೀಶ ಹಯವದನ ಪರಕೇದು ಬಾಳು" ಎಂಬಲ್ಲಿ ಉದ್ವೇಗವನ್ನು ಉದ್ರೇಕವನ್ನು, ಕ್ರೋಧವನ್ನು ತಾಳ್ಮೆಯಿಂದ ನಿಯಂತ್ರಿಸ ಬೇಕೆನ್ನುವ ಸಹಿಷ್ಣುತಾ ಸಂಹಿತಯಿದೆ.

ವಾದಿರಾಜರು ಪರಿತಪಿಸುವ ಪರಿ ಹೃದಯ ಹಿಂಡುತ್ತದೆ 'ಅತಿಗಾಧಾರ ವಿಲ್ಲ, ಹಿಡಿವ್ಯದಕೆ ಕೊಂಬಿಲ್ಲ, ಕಡೆಹಾಯಿಸುವರಿಲ್ಲ, ಕಷ್ಟ ಪಡ್ಡೀನಲ್ಲ, ಕಣ್ಣೀರು ಬಿಡಲಿಲ್ಲ, ಕಾಯ ಸುಖಪಡಲಿಲ್ಲ. ಋಣಹೋಗಿ ಬಾಯಿ ಮರೆತಂತಾಯಿತಲ್ಲ. ಬಡತನವು ಬಿಡಲಿಲ್ಲ ಭಂಗಪಟ್ಟೆನಲ್ಲ, ಗರುಡ ಸರ್ಪನ ಸ್ನೇಹವಂತಾಯಿತಲ್ಲ, ಎನ್ನ ಕಷ್ಟವಾರ ಮುಂದುಸುರಲೋ ಶ್ರೀ ಹಯವದನರಾಯ." ಈ ಮಿಡಿತವೇ ವಾದಿರಾಜರಿಗೆ ಪರಮಾತ್ಮನ ಬಗ್ಗೆ ಅಪಾರ ಶ್ರದ್ಧಾಭಕ್ತಿಗಳಾಗಿ ಪರಿಣಮಿಸಿ "ಪರಿಯೇ ನೀನಲ್ಲದೆ ಅನ್ಯದೈವವನೊಲ್ಲೆ–ಕರುಣಿ ಹಯವದನನ್ನ ಕಾಯದೇ ಇರಲೊಲ್ಲ" ಎಂಬ ನಿರ್ಧಾರಕ್ಕೆ ಬಂದವರು ಚಿತ್ತಚಾಂಚಲ್ಯ, ಕ್ಷಣಿಕ ವಿಷಯಾಸಕ್ತಿ, ಭೋಗ ಭಾಗ್ಯಗಳಲ್ಲಿ ಆಕಾಂಕ್ಷೆಗಳಲ್ಲಿ ಬದುಕಿನಲ್ಲಿ ಮುಳುಗಿರುವವರಿಗ ಎಚ್ಚರಿಸುವಂತೆ "ದಿನಗಳನು ಕಳೆವ ಜನರೇ ಸುಜನರು, ಪರಜನಾಧೀನ ದಾನ ಜನನಮಾಗಮದಿಂದ, ಅರುಣೋದಯದಲೆದ್ದು ಆಜಮನ ಕ್ಷೇತ್ರದಲ್ಲಿ ಪರಿಶುದ್ಧರಾಗಿ ಇಹಪರಗಳಿಂದ" ಎಂಬ ಸಂದೇಶವನ್ನು ನೀಡಿದವರು. ಪರಿಪರಿ ಯಿಂದ ಪರಮಾತ್ಮನಲ್ಲಿ ಅವರು "ನಿನ್ನ ಧ್ಯಾನದ ಶಕ್ತಿಯ ಕೊಡೊ ಅನ್ಯರಲಿ ವಿರಕ್ತಿಯ ಕೊಡೊ ನಿನ್ನ ನೋಡುವ ಯುಕ್ತಿಯ ಕೊಡೊ ನಿನ್ನ ಪಾಡುವ ಭಕ್ತಿಯ ಕೊಡೊ ನಿನ್ನಲಿ ಒರುವ ಸಂಪತ್ತಿಯ ಕೊಡೋ ಎಂದು ಕೇಳಿ ಕೊಂಡು "ಜ್ಞಾನಿಗಳರಸನೆ ದಯವಿಟ್ಟು ನಿನ್ನನು ಧ್ಯಾನಿಸುವಂತೆ ಮಾಡೋ ಹಯವದನ" ಎಂದು ಪ್ರಾರ್ಥಿಸುತ್ತಾರೆ. "ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ' ಎನ್ನುವ ವಾದಿರಾಜರು ಆತನೊಲಿದ ಮೇಲಿನ್ನಾತರ ಭಯ ಎನ್ನುವಂತೆ, "ಪಾಪಕಂಜೆನೋ ಸಂತಾಪಕಂಜೆನೋ ನಾನು ಪಾಪಿ ಜನರ ಬಲು ಕೋಪಕಂಜೆನೋ ನಾನು ಆಪತ್ತಿಗಂಜೆ ಯಮನ ಪಾಶಕಂಜೆನೋ ತಾಪಕಂಜೆನೋ ಅನ್ಯರ ಪಾಟಿ ಮಾಡೆನೋ ತಾಪಸರಿಗೊಲಿದ ಶ್ರೀಪತಿ ದಯ

ವದನನ ಆ ಪಾದಪದುಮದ ನೆನಹೊಂದಿದ್ದರೆ ನಾಕು' ಎಂದು ತಮ್ಮ ಕಳಕ-ಳಿಯನ್ನು ಭಕ್ತಿಲಹರಿಯ ದಿವ್ಯ ನುಡಿಗಳನ್ನು ಬಿಚ್ಚಿಟ್ಟಿದ್ದಾರೆ

“ಪಾಥೇಯವ ಕಟ್ಟಿರೋ ವೈಕುಂಠಕೆ ಪಯಣ ಸಮ್ಮತವಾದರೆ ಎನ್ನುವ ವಾದಿರಾಜರು ಅದನ್ನು ಕಟ್ಟುವ ರೀತಿಯನ್ನು ಹೇಳುತ್ತಾರೆ “ಮಾತಾಪಿತರುಗಳಿಂದ ಭಕ್ತಿಚಿತ್ರಾನ್ನವನು ಪಾರ್ಥಸೂತನ ಪಾದಪದ್ಮ ಪತ್ರವ ಹಾಸಿ ಕಟ್ಟಬೇಕು ಎಂದು ಭಗವಂತನನ್ನು ಕಾಲು ಕಟ್ಟುವ ವಿಧಾನವನ್ನು ತಿಳಿಸಿರುವರು

ಉಡುಪಿಯ ಕೃಷ್ಣನನ್ನು ಕಂಡೊಡನೆಯೇ ವಾದಿರಾಜರ ಧ್ಯಾನನಾಚಿತ್ರದ ಕಣ್ಣಿಡ ಕುದುರೆ ನಾಗಲೋಟದಲ್ಲಿ ಓಡತೊಡಗುತ್ತದೆ “ನೆನೆವೆನನುದಿನ ನೀಲ ನೀರದವರ್ಣನ, ಗುಣರನ್ನನ. ಮುನಿಜನಪ್ರಿಯ ಮುದ್ದು ಉಡುಪಿಯ ರಂಗನ ದಯಾಪಾಂಗನ ಹಾಗೆಯೇ ತ್ರಿವಿಕ್ರಮ ದೇವರನ್ನು ಪೂಜಿಸುತ್ತಾ “ತ್ರಿವಿಕ್ರಮ ರಾಯನ ನಂಬಿರೋ ಭುವನದೊಳ್ ಭಾಗ್ಯವ ತುಂಬಿರೋ. ನವೆಯದ ಸುಖವ ಸವಿಯುಂಬಿರೋ, ದಾನವನ ಮನ್ನಣೆಯ ಕೈಕೊಂಬಿರೋ’ ಎಂದು ಜಗತ್ತನ್ನೇ ವಿಸ್ಮಯಗೊಳಿಸಿದ ತ್ರಿವಿಕ್ರಮಾವತಾರವನ್ನು ಕೊಂಡಾಡುವರು ಹಾಗೆಯೇ ಹನುಮನನ್ನು ಕೊಂಡಾಡುತ್ತಾ “ಪ್ರಾಣನ ನೋಡಿರೈ ಮುಖ್ಯ ಪ್ರಾಣನ ಪಾಡಿರೈ ಕ್ಷೋಣಿಯೊಳಗ ವಣ್ಣೆರಚಿತ ಪಾವನಚರಿತ ಸದ್ಗುಣಭರಿತ ಎಂದೂ ಭೀಮನನ್ನು “ಭೀಮಸೇನನ ಮಹಿಮ ಅಗಣಿತ ಗುಣಸ್ತೋಮ ಕಾಮಪಿತನ ಬಂಟ ನೆನೆವರಿಗ ನಂಟ’ ಎಂದೂ ಮಧ್ವಾಚಾರ್ಯರನ್ನು “ದುರುಳ ವಾದಿಗಳೆಂಬ ಘನ ತಾಮಸಕೆ ದಿನಪ ಸಿರಿಯರಸ ಹಯವದನ ಪದಕಂಜಯುಗ ಮಧುಪ ಗುರುಮಧ್ವಮುನಿಪ ನಿರ್ಲೇಪ ಶುದ್ಧಸ್ವಾಂತ ವರವಿದ್ಯಾಪ್ರತಾಪ ಭಾಸ್ವದ್ವರಮಹಾನೂಪ ಭೂರಿ ಪ್ರತಾಪ” ಎಂದು ತಮ್ಮ ವಾಗ್ವೈಖರಿಯ ಪುಷ್ಪಗಳಿಂದ ಅರ್ಚಿಸಿದ್ದಾರೆ ಹಾಗೆಯೇ ಈಶ್ವರನನ್ನು ಸ್ತುತಿಸುವ ವಾದಿರಾಜರು “ಧವಳಗಂಗೆಯ ಗಂಗಾಧರ ಮಹಾಲಿಂಗ ಮಾಧವನ ತೋರಿ ನಮ್ಮ ಗುರು ಕುಲೋತ್ತುಂಗ ಮಾರನ ಗದ್ದ ಮನೋಹರಮೂರ್ತಿ, ನಾರ ಸಜ್ಜನರಿಗೆ ಸುರ ಚಕ್ರವರ್ತಿ, ಧಾರುಣಿಯೊಳಗೆ ತುಂಬಿದೆ ನಿನ್ನ ಕೀರ್ತಿ, ಹರಿಯ ತೋರಿಸಯ್ಯ ನಿನಗ ಶರಣಾರ್ಥಿ ಎಂದೂ, ವೇದವ್ಯಾಸ ದೇವರನ್ನು “ಮಧ್ವಾಂತರ್ಗತ ವೇದವ್ಯಾಸ ಕಾಯೋ ಮಧ್ಯ ಮೂರುತಿಯೇ ಸರ್ವೇಶ”

ಎಂದೂ ಕೊಂಡಾಡಿದ್ದಾರೆ. ಮಧ್ವ ಪರಂಪರೆಯಲ್ಲಿ ಖ್ಯಾತರಾದ ಜಯತೀರ್ಥರನ್ನು "ಭಳಿರೆ ನಿಮ್ಮಯ ಗುಣವ ವರ್ಣಿಸಲಳವೇ ಜಲಧಿಸಮ ಗಂಭೀರ ಜಯತೀರ್ಥವರ್ಯ , ಮಧ್ವರಾಯರೆ ಒಂದು ಮತ್ತೊಂದು ರೂಪದಲಿ ಇದ್ದು ನುಡಿದಂದದಲಿ ಸಿದ್ಧಾಂತವನು ನೀ ಉದ್ಧರಿಸಿ ಲೋಕದಲಿ ಅದ್ವೈತಮತದವರ ಉದ್ವೇಗದಿಂದ ಒಲು ಮುಗ್ಧರನು ಮಾಡಿದೆ" ಎಂದು ಹೃತ್ಪೂರ್ವಕ ಸ್ತುತಿಸಿದ್ದಾರೆ. ಹರಿದಾಸ ಸಾಹಿತ್ಯ ಪ್ರವರ್ತಕ ಶ್ರೀಪಾದರಾಜರನ್ನು ಸ್ತುತಿಸುವ ವಾದಿರಾಜರು "ಶ್ರೀಪಾದರಾಜರ ದಿವ್ಯಶ್ರೀ ಪಾದವ ಭಜಿಸುವೆ' ಎಂದು ಹೇಳಿ ಸ್ವರ್ಣವರ್ಣತೀರ್ಥರ ಸುತ, ವಾಗ್ವಜ್ರಗಳಿಂದ ಮಾಯಾವಾದಿಗಳೆಲ್ಲರ ಬಾಯಿ ಬೀಗಬಿಕ್ಕಿ ಮುಚ್ಚಿಸಿದವರೂ ವ್ಯಾಸರಾಜರಿಗೆ ವಿದ್ಯಾಭ್ಯಾಸ ಮಾಡಿಸುವವರೂ ಎಲ್ಲಕ್ಕೂ ಮಿಗಿಲಾಗಿ ದಾಸರ ನಾಮಗಳಿಂದ ಲೇಸುಲೇಸೆಂದೆನಿಸಿಕೊಂಬುವರೂ ಎಂದು ಹೃತ್ಪೂರ್ವಕ ಪ್ರಶಂಸಿಸಿರುವರು ಶ್ರೀ ವ್ಯಾಸರಾಯರನ್ನು ಸ್ತುತಿಸುವ ಕೃತಿ "ಒದಿದಾಕ್ಷಣದಿಂದ ಧನ್ಯನಾದೆನು ನಾನು, ಸಾಧಿಸಿದೆವನೆ ನಿನ್ನ ಸೇವೆಯನು, ಆದಿಮೂರುತಿ ಸಿರಿಹಯವದನರೇಯ ಮೋದದಿಂದ ನಿನ್ನ ದಾಸರ ಸಂಗದಲ್ಲಿಡು ಕಂಡ್ಯ ಎಂದಿದ್ದು ವೈಕುಂಠದಾಸರನ್ನು 'ದಾಸೋತ್ತಮ ನೀನೇ' ಎಂದು ಹೇಳಿ ತಮಗೆ ವರಬೊಮ್ಮನ ಕೂಸು ಮಾಡಿ ತಂದಿಕ್ಕಿ ತೊಡೆಯ ಮ್ಯಾಲೆ ಆಡಿಸಿದವರು, ಹರಿಯ ತೋರಿಸಿ ಪರಮಧನ್ಯನ ಮಾಡಿದವರು ಎಂದು ಮುಕ್ತವಾಗಿ ಕೊಂಡಾಡಿದ್ದಾರೆ

## ಪುರಂದರದಾಸರು

ನವಕೋಟಿ ನಾರಾಯಣರಾಗಿದ್ದ ಶ್ರೀನಿವಾಸ ನಾಯಕರು, ಐಶ್ವರ್ಯದಲ್ಲಿ ನೋಡಿದರೆ ಏಳು ಕೊಪ್ಪರಿಗೆಯ ಚಿನ್ನದ ಧಣಿ. ಅಂತಸ್ತಿನಲ್ಲಿ ಉಪ್ಪರಿಗ ಮಹಲುಗಳ ಭೂಪತಿ ಸ್ವರೂಪದಲ್ಲಿ ಸಾಕ್ಷಾತ್ ನಾರದರು ಸಾಹಿತ್ಯದಲ್ಲಿ ಐದು ವರ್ತಮಾನಗಳ ಕಾಲ ಉಳಿದು ನಿಂತ, ಬೆಳೆದು ನಿಂತ ತ್ರಿವಿಕ್ರಮ ಶಕ್ತಿ ಸಂಗೀತದಲ್ಲಿ ಕರ್ನಾಟಕ ಸಂಗೀತ ಸ್ಥಾಪನಾಚಾರ್ಯ. ತ್ಯಾಗದಲ್ಲಿ ಒಂದೇ ಕ್ಷಣದಲ್ಲಿ ಸಕಲ ಸಂಪತ್ತಿಗೂ ಒಂದು ತುಳಸೀದಳ ಎಸೆದು ಕೃಷ್ಣಾರ್ಪಣ ಎಂದು ತಾಳ ತಂಬೂರಿ ಹಿಡಿದು ಹೊರಟ ವೈರಾಗ್ಯ ನಿಧಿಗಳು, ನೀತಿಮಾರ್ಗದಲ್ಲಿ, ಮಾನವೀಯ ಭಾವನೆಗಳ ಸಕಲ ನೀತಿ ಕೋವಿದ, ಜ್ಞಾನದಲ್ಲಿ ಅಪರೋಕ್ಷ

ಜ್ಞಾನಿ, ಅನುಭವದಲ್ಲಿ ಅನುಭಾವಿ, ಕರ್ನಾಟಕದ ಇತಿಹಾಸದಲ್ಲಿ ಐತಿಹಾಸಿಕ ಸಾಧನೆಯ ಸಂಸ್ಕೃತಿ ಪುರುಷ

ದಾಸ ಸಾಹಿತ್ಯದ ಸುಪ್ತ ಚಿಲುಮೆಯನ್ನು ಚಿಮ್ಮಿಸಿದ ಪುರಂದರದಾಸರು ಸಾಹಿತ್ಯದೊಡನೆ ಸಂಗೀತವನ್ನು ಮೇಳೈಸಿದರು ಜ್ಞಾನದಲ್ಲಿ ಭಕ್ತಿಯನ್ನು ಅಡಗಿಸಿದರು ಐಶ್ವರ್ಯಕ್ಕೆ ವೈರಾಗ್ಯವನ್ನು ಮುಡಿಸಿದರು ಭಕ್ತಿಮಾರ್ಗದಿಂದ ಭಗವಂತನ ದಿವ್ಯ ಚರಣಗಳಲ್ಲಿ ಸರ್ವಸಮರ್ಪಣ ಮಾಡಿ ಸಕಲ ಚರಸ್ಥಿರ ಆಸ್ತಿ ಆಕಾಂಕ್ಷೆಗಳನ್ನು ಕೃಷ್ಣಾರ್ಪಣ ಎಂದು ದಾನಮಾಡಿ ದಾಸರು ಊರಿಂದೂರಿಗೆ, ಮನೆಯಿಂದ ಮನೆಗೆ, ಮನದಿಂದ ಮನಕ್ಕೆ ದೀಕ್ಷಾಬದ್ಧರಾಗಿ ಹೊರಟ ಮಹಾತ್ಮರು ದಾಸರ ಬಾಯಿಂದ ಬಂದ ಅಮೂಲ್ಯ ನುಡಿಮುತ್ತುಗಳು ಶತಶತಮಾನಗಳಿಂದಲೂ ಲಕ್ಷಲಕ್ಷ ಜನರ ಸಾಂಸ್ಕೃತಿಕ ಉದ್ದೀಪನ ಶಕ್ತಿಯಾದವು ಲೋಕನೀತಿಯ ಮಾರ್ಗದರ್ಶಿಗಳಾಗಿ ತತ್ವಬೋಧನೆಯ ಆತ್ಮವೀಕ್ಷಕರಾಗಿ ಹರಿನಾಮ ಸ್ಮರಣೆಯ ಸಂಜೀವಿನಿಯನ್ನು ಸಜ್ಜನ ಸಮುದಾಯಕ್ಕೆ ಹಂಚುತ್ತಾ ಹೊರಟ ದಾಸರೆಂದರೆ ಪುರಂದರದಾಸರಯ್ಯಾ, ಪರಿಶುದ್ಧ ಹಾಗೂ ಪವಿತ್ರ ಜೀವನದ ಸನ್ಮಾರ್ಗವನ್ನು ಪಾಮರರಿಗೆ ತೋರಿಸಿದ ಪುರಂದರದಾಸರು ಹೂವ ತರುವವರ ಮನೆಗೆ ಹುಲ್ಲನ್ನು ತರುವ ಭಗವಂತ ಒಮ್ಮೆ ನೆನೆದರೆ ಸಾಕು ಗಮ್ಮನೆ ಓಡಿಬರುವನೆಂಬ ಅಚಲ ಶ್ರದ್ಧೆಯಿರಿಸಿಕೊಂಡಿದ್ದವರು

ಪುರಂದರದಾಸರು ಸಮಾಜವಾದಿಗಳು ಆರೋಗ್ಯಕರ ಸಮಾಜದ ನಿರ್ಮಾಣದ ದೀಕ್ಷೆಯಿರಿಸಿಕೊಂಡಿದ್ದವರು ತಮ್ಮ ನೀತಿಬೋಧಗಳ ಮೂಲಕ ಹೃದಯದ ಮಲಿನವಾಸನೆಗಳನ್ನು ಕೊಚ್ಚುವ ಕ್ರಿಯಾತ್ಮಕ ಕೆಚ್ಚಿನಿಂದ ಸಮಾಜದ ಶುದ್ಧೀಕರಣ ಚಳುವಳಿಯನ್ನು ಆರಂಭಿಸಿದರು ಪರಿಸರಮಾಲಿನ್ಯ ನಿವಾರಣೆಗಾಗಿ ಜ್ಞಾನನಾಡಿಯ ಸಿಂವಡಿಕೆಗಳನ್ನು ಮಾಡಿ ಪ್ರಜ್ಞೆಯ ಪೂರ್ಣ ಬೆಳೆ ತೆಗೆದರು "ಹೃದಯ ಹೊಲವ ಮಾಡಿ, ಮನವ ನೇಗಿಲ ಮಾಡಿ ವ್ಯಾಸನೋ ಜ್ಞಾನ ಎಂಡೆತ್ತು ಮಾಡಿ, ಜ್ಞಾನವೆಂಬೋ ಹಗ್ಗ ಕಣ್ಣಿಯ ಮಾಡಿ, ನಿರ್ಮಮವೆಂಬ ಗುಂಟೇಲಿ ಹರವಿ. ಮದಮತ್ಸರಗಳೆಂಬ ಮರಗಳನೆ ತಂದು, ಕಾಮ ಕ್ರೋಧಗಳೆಂಬ ಕಳೆಯ ಕಿತ್ತು, ಪಂಚೇಂದ್ರಿಯವೆಂಬೋ ಮುಂಚಿಕೆಯನೆ ಹಾಕಿ

ಚಂಚಲವಂಚೋ ಹಕ್ಕಿಯಹೊಡೆಯಿರಯ್ಯಾ" ಎಂದು ಹೇಳಿ ಇಡೀ ಸಮಾಜದಲ್ಲಿ ಭಕ್ತಿಯ ಬೆಳೆ ಬಿತ್ತಿದರು

ದಾಸರ ಸಮಾಜವಾದ ಬಡವರ ಪಕ್ಷಪಾತಿ. ದಾಸರು ಬಡವರ ಪ್ರತಿನಿಧಿಗಳು 'ಬಡತನವಿರಲಿ ಕಡೆತನಕ' ಎಂದು ಬಡವರಿಗೆ ದೀನದಲಿತರಿಗೆ ಮಾನ, ಗೌರವ, ಆತ್ಮವಿಶ್ವಾಸಗಳ ಸಮೃದ್ಧ ಶ್ರೀಮಂತಿಕೆಯನ್ನು ಧಾರೆಯೆರೆದ ದಾರ್ಶನಿಕ ದೊರೆಗಳು ದಾಸರು ತಂಬೂರಿ ಹಿಡಿದು ಭಿಕ್ಷೆಗೆ ಹೊರಟರೆ 'ರಾಗಿಯ ತಂದೀರಾ, ಭಿಕ್ಷಕೆ ರಾಗಿಯ ತಂದೀರಾ' ಪ್ರತಿಧ್ವನಿ

ದಾಸರು ಹರಿದಾಸ ದೀಕ್ಷೆ ಪಡೆದು ಊರೂರು ತಿರುಗಾಡಿ ಎಲ್ಲ ಜನರೊಂದಿಗೆ ಬೆರೆತು ದಿನದಿನವೂ ಅವರಿಗೆಲ್ಲಾ ರಾಮನಾಮಪಾಯಸ ಹಾಗೂ ಕೃಷ್ಣನಾಮ ಸಕ್ಕರೆಯ ಸವಿಯನ್ನು ಮನದಟ್ಟು ಮಾಡಿಕೊಟ್ಟರು. ಹೀಗೆ ಸಮಸ್ತ ಜನಸಾಮಾನ್ಯರ ನಡುವೆಯೇ ಬಂದ ಅವರಿಗೆ 'ಮಾನವ ಜನ್ಮ ದೊಡ್ಡದು' ಇದನ್ನು ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ' ಎಂದು ಆತ್ಮೀಯ ಧ್ವನಿಯಲ್ಲಿ ಹೇಳುವ ಸಾಮರ್ಥ್ಯವಿತ್ತು ಶಾಸ್ತ್ರ ವಿಚಾರಗಳನ್ನು ಕನ್ನಡದಲ್ಲಿ ಮೂಡಿಸಿ 'ಧರ್ಮವೇ ಜಯವೆಂಬ ದಿವ್ಯ ಮಂತ್ರ'ವೆಂದು ಹೇಳಿ ಪಾಮರರ ಉದ್ಧಾರಮಾರ್ಗವನ್ನು ತೋರಿಸಿದರು "ಮಡಿಮಡಿ ಮಡಿಯೆಂದು ನೂರ್ಮಡಿ ಹಾರುತಿ ಮಡಿ ಎಲ್ಲಿ ಬಂತೋ ಬಿಕನಾಸಿ ಮಡಿ ಮಾಡುವ ಬಗೆ ಬೇರುಂಟು' ಎಂದು ಹೇಳಿ ಮಡಿಯೆಂದರೆ ಹೊರಗಿನ ತೋರಣವಲ್ಲ ಒಳಗಿನ ಹೂರಣ ಅದೊಂದು ಹೃದಯ ಸಂಸ್ಕಾರ ಎಂಬುದನ್ನು ಸಮರ್ಥವಾಗಿ ಪ್ರತಿಪಾದಿಸಿದರು ಆಚಾರವಿಲ್ಲದ ನಾಲಿಗೆಯನ್ನು ನೀಚ ಬುದ್ಧಿಯ ನಾಲಿಗೆಯನ್ನು' ಹತೋಟಿಗೆ ತೆಗೆದುಕೊಂಡು ಹರಿನಾಮದ ಅಮೃತವನ್ನು ಸವಿಯಲು ಜನತೆಗೆ ತಿಳಿಸಿದರು. ಪರಮಾರ್ಥನಲ್ಲಿ ಲೇಶಭಕ್ತಿಯಿಲ್ಲದ' ಇವರ ವೈರಾಗ್ಯದ ಜನರು ನೀರಿನಲ್ಲಿ ಮುಳುಗಿ ಗಡಗಡ ನಡುಗುತ್ತಾ ಕಂಚುಗಾರನ ಬಿಡಾರದಂತೆ ಹರಡಿಕೊಳ್ಳುವ ಬೂಟಾಟಿಕೆಯನ್ನು ಕಂಡು ನಗುವ ದಾಸರು ಜ್ಞಾನ, ಸ್ನಾನ ಧ್ಯಾನಗಳ ಸರಿಯಾದ ಅರ್ಥವನ್ನು, ಅದರ ಅನುಸಂಧಾನವನ್ನು ಜನತೆಗೆ ಮಾಡಿಕೊಟ್ಟರು

ಜನರ ಆಡುಮಾತನ್ನೇ ಕಾವ್ಯದ ನೆಲೆಗಟ್ಟಿಗೇರಿಸಿದ ಪುರಂದರದಾಸರು, ಗೀತ ಸಂಗೀತದ ಮೂಲಕವಾಗಿ ಜನಮನದ ತಂತಿಗಳನ್ನು ಮಿಡಿದರು ಆ ಮೂಲಕ ಆಧ್ಯಾತ್ಮಿಕ ರಹಸ್ಯಗಳನ್ನು ಜನತೆಗೆ ಸ್ಪಂದಿಸಿದರು ತಮ್ಮ ಕಾಲದ ಸಂವೇದನೆಗಳನ್ನು, ಅನಂತಕಾಲದ ಸತ್ಯಗಳನ್ನೂ ಸೂಕ್ಷ್ಮವಾಗಿ ಗುರುತಿಸಿದರು ಅದುವರೆಗೆ ಯಾರೂ ಹೇಳಿರದ ರೀತಿಯಲ್ಲಿ ಆ ಸತ್ಯವನ್ನು ತತ್ವವನ್ನು ಮಹತ್ವಪೂರ್ಣವಾಗಿ ಹೇಳಿದ ಪುರಂದರದಾಸರು ಮುಂದಿನ ಜನಾಂಗಕ್ಕೆ ವಿಶಿಷ್ಟ ರಸಾನುಭವ ನೀಡಿದರು ಬದುಕಿನ ನಿಗೂಢಗಳನ್ನು, ಒಳಹೊರಗುಗಳನ್ನು ಇದ್ದಕ್ಕಿದ್ದಂತೇ ಜನತೆಯ ಕಣ್ಮುಂದೆ ಬಿಚ್ಚಿಟ್ಟರು ಸಂಸ್ಕೃತದ ಶಾಸ್ತ್ರ ಪಂಡಿತರ ಗುಪ್ತ ಸರಕಿನಲ್ಲಿದ್ದ ವಿಶ್ವದ ವಿವಿಧ ವಿಚಾರಗಳನ್ನು ಕನ್ನಡದಲ್ಲಿ ಹರಡಿದ ದಾಸರ ನುಡಿಗಳಿಗೆ ಭಾಷೆ ಮೈ ಛಳಿಬಿಟ್ಟು ಅರಳಿಕೊಂಡಿತು ಕನ್ನಡ ಜನತೆಗೆ ಕಣ್ಣು ಕಿವಿಗಳ ತೀಕ್ಷ್ಣತೆಯನ್ನು, ಭಗವದ್ವಿಚಾರದ ಉದ್ದೀಪನವನ್ನು, ಬಾಳಿಗೆ ಅರ್ಥವನ್ನು ಪುರಂದರದಾಸರು ತಂದುಕೊಟ್ಟರು

ನಾರದರಂತೆ ನಾದಯೋಗಿಗಳಾಗಿದ್ದ ಪುರಂದರದಾಸರು ನುಡಿದದ್ದೆಲ್ಲಾ ಉಪನಿಷತ್ತಾಯಿತು ಅದಕ್ಕಾಗಿಯೋ ಏನೋ, ಅವರ ಗುರುಗಳಾದ ವ್ಯಾಸರಾಜರು ಪುರಂದರದಾಸರ ಕೃತಿಗಳನ್ನು ಪುರಂದರೋಪನಿಷತ್ತು ಎಂಬ ಮಹಾಮನ್ನಣೆಯ ಮುದ್ರೆ ಹಾಕಿ ಗೌರವಿಸಿದರು 'ವ್ಯಾಸರಾಜರ ಚರಣ ಕಮಲ ದರುಶನ ಮಾತ್ರದಿಂದ' ಪುರಂದರದಾಸರ 'ನಾಸಿರಕುಲಕೋಟಿ ಪಾವನವಾಯಿತು' ಪ್ರೀವನ್ನು ಭಜಿಸುವ ಅಧಿಕಾರಿಗಳಾದರು ದೋಷರಹಿತನಾದ ಪುರಂದರ ವಿಠಲನ ಅನುಗ್ರಹ ಧಾರೆ ಚಿಮ್ಮಿಬಂತು. ಹಾಗಾಗಿಯೇ ಪುರಂದರದಾಸರು ಮಿಡಿದದ್ದೆಲ್ಲಾ ಹಾಡಾಯಿತು ಕಡೆದದ್ದೆಲ್ಲಾ ನವನೀತವಾಯಿತು ಕನ್ನಡ ಜನಮಾನಸದಲ್ಲಿ ಎಂದೆಂದೂ ಹಾರಾಡುತ್ತಿರುವ ಸ್ವಚ್ಛಂದವಿಹಾರಿಗಳಾದರು ಪುರಂದರದಾಸರು

ಹರಿದಾಸರ ಪಡೆಗ ನೇತಾರರಾದ ಪುರಂದರದಾಸರು ದಾಸಕೂಟಕ್ಕೆ ಅಗತ್ಯವಿದ್ದ ಘನತೆಗೌರವಗಳನ್ನೂ, ಧೈರ್ಯ ಸ್ಥೈರ್ಯಗಳನ್ನೂ ತಂದು ಕೊಟ್ಟರು ಎಂತಹ ಕಷ್ಟಸಂಕಷ್ಟಗಳ ಅಗ್ನಿಪರೀಕ್ಷೆಯಲ್ಲೂ ಪುಟಕ್ಕಿಟ್ಟ ಚಿನ್ನದಂತೆ ಹೊರಬರಲು ಹರಿದಾಸರಿಗೆ ಕರೆನೀಡಿದ ದಾಸರು "ಊರನಾಳುವ

ದೊರೆಗಳು ನಮ್ಮನ್ನು ದೂರ ಅಟ್ಟಿದರೇನು, ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು, ಮಾರಿಹಿಂಡು ಮತ್ತೆ ಮುಸುಕಿದ ದಂಡು ಮೈಗೆ ಮುತ್ತಿದರೇನು, ವಾರಿಜನಾಭನ ವಸುದೇವಸುತನ ಸಾರುವಂಥ ಹರಿದಾಸರಿಗೆ' ಎಂದು ಕರೆನೀಡಿದರು ಬದುಕಬೇಕಾದ ಜೀವನದ ರೀತಿಯನ್ನು ತಲಸ್ಪರ್ಶಿಯಾಗಿ ಕಾಣಿಸಿಕೊಟ್ಟ ಪುರಂದರದಾಸರು ಬದುಕಿನಲ್ಲಿ ತಾವರೆ ಎಲೆಯ ಮೇಲಿರುವ ಜಲಬಿಂದುವಿನಂತೆ ಇರಬೇಕು ಇಲ್ಲದಿರಬೇಕು ಎಂದು ಸಜ್ಜನರು ಬದುಕಬೇಕಾದ ರೀತಿಯನ್ನು ತಿಳಿಸಿಕೊಟ್ಟರು. 'ಕಷ್ಟಿಯ ಕಟ್ಟಿದರು ಭವಸಾಗರಕೆ ಸ್ವಲ್ಪಬಿಟ್ಟು ತಿವೇಗದಿಂದ ಸಾಧ್ಯ ಮಾಡಿಕೊಂಡು ಮುಟ್ಟಿಕೆಯಿಂದಲಿ ದಾಟಿ ಹೋದ ಜಗಜ್ಜಟ್ಟಿ ದಾಸರು ಪುರಂದರದಾಸರು. ಸಿದ್ಧಪುರುಷರಾಗಿದ್ದ ಪುರಂದರದಾಸರನ್ನು ಕುರಿತು ತಾದಾತ್ಮ್ಯಭಾವದಿಂದ ಹಾಡಿದ ವಿಜಯದಾಸರು "ದೇಶದೇಶದೊಳಗೆಲ್ಲಾ ಇವರ ಸರಿಕಾಣೆನೋ, ವಾಸುದೇವನ ಪಾದ ಹೃದಯ ಮಧ್ಯದಲ್ಲಿಟ್ಟು, ಲೇಸಾಗಿ ಪೂಜಿಪರು ಭಕುತಿಯಲ್ಲಿ, ಲೇಶವಾದರೂ ಕಾಮಕ್ರೋಧಾದಿಗಳಿಲ್ಲ ಈ ಸುಲಭ ಗುರುಗಳಿಗೆ ಆವಲ್ಲಿ ಸರಿಕಾಣೆ ವಿನಯಗೆಯಿಂದ ಕರುಣ ಮಾಡುವರೋ, ಈ ಶರೀರವ ಅವರ ಸದನದಲ್ಲಿ ಇಟ್ಟು, ದಾಸಾನುದಾಸರ ಯುಗಳ ಪಾದಕ್ಕೆ ನೀವಾಳಿಸಿ ಬಿಸುಡುವೆನೋ, ಅನಂತ ಜನುಮದಲ್ಲಿ ಈ ಸುಖ ತಪ್ಪದೆ ಎನಗಾಗಲಿ ಬಿಡದ ವಿಜಯವಿಠಲನ ದಯದಿಂದ, ದಾಸಪುರಂದರ ಗುರುಗಳ ಒಲುಮೆ ಎಂದು ಸ್ತುತಿಸಿ ಧನ್ಯರಾದರು.

ಪುರಂದರದಾಸರು ಕನ್ನಡದ ಪ್ರಜ್ಞೆ, ಪ್ರಬುದ್ಧತೆಗಳಿಗೆ ಸಾಕ್ಷಿಯಾದವರು. ಭಾಗವತ ಧರ್ಮದ ವ್ಯವಸ್ಥಿತ ಪ್ರಸಾರ ಮಾಡಿದವರು ಕೀರ್ತನಕಾರರಿಗೆ ಹೊಸದೊಂದು ಆಕರ್ಷಕ ಮಾರ್ಗದ ಪರಿಚಯ ಮಾಡಿಕೊಟ್ಟು ಸಂಕೀರ್ತನೆಗೆ ಸಾಹಿತ್ಯ, ಸಂಗೀತ, ಶ್ರದ್ಧೆ, ನಿಷ್ಠೆಗಳ ಬಂಧವನ್ನು ಬೆಸೆದರು ಅಜ್ಞಾನ, ಆಡಂಬರ ಅಹಂಕಾರಗಳ ಮೈಲಿಗೆಯನ್ನು ಕಳೆಯಲು ಜ್ಞಾನ ತೀರ್ಥದಲ್ಲಿ ಸ್ನಾನಮಾಡಲು ಸಕಲ ಸಜ್ಜನ ಸಮುದಾಯಕ್ಕೆ ಕರೆನೀಡಿದರು ತಾವಿದ್ದ ಪರಿಸರದಲ್ಲಿ ಹಾಗೂ ತಾವು ಬಂದ ಪರಂಪರೆಯಲ್ಲಿ ಪ್ರೇಮರಸ ಪ್ಲಾವಿಸುವಂತೆ ಮಾಡಿ, ವಿಶ್ವಾಸ ವಾತ್ಸಲ್ಯಗಳ ಏಕೋಪಾಸನೆಯನ್ನು ಆ ಮೂಲಕ ಮಾಡಿದ ನಾದಮಹರ್ಷಿಗಳು ಪುರಂದರದಾಸರು

ಮನುಷ್ಯನ ಆಯುಷ್ಯವು ವೃಥಾ ಸೋರಿಹೋಗುತ್ತಿದೆಯೆನ್ನುವ ದಾಸರು "ಹಗಲೆಲ್ಲಾ ಹೊಟ್ಟೆಪಾಡು ರಾತ್ರಿಯೆಲ್ಲಾ ನಿದ್ದೆ, ವಿಷಯಸುಖ, ಬಾಲ್ಯವೆಲ್ಲಾ ಅಜ್ಞಾನ, ವೃದ್ಧಾಪ್ಯವೆಲ್ಲಾ ಅಶಕ್ತತೆ, ಚಿಂತೆ, ಯೌವನವೆಲ್ಲಾ ದುಡಿಮೆ, ಸುಖಭೋಗಗಳಿಂದಾಗಿ ಹರಿಸ್ಮರಣೆಗ ಮಾಡಲೇಬೇಕಾಗಿರುವ ಅಮೂಲ್ಯ ವೇಳೆಯನ್ನು ಹಾಳುಮಾಡಿಕೊಳ್ಳುತ್ತಿರುವ ಜನರಿಗೆ 'ತಾನು ಬಾರಿಸುತಿಪ ಕೇಳಿ, ಹರಿ ಎದ್ದೇಳಿ' ಎಂದು ಎಚ್ಚರಿಸುತ್ತಾರೆ. ಈ ಜಗತ್ತಿನಲ್ಲಿ ಮಹಾಮೂರ್ಖರು ಯಾರೆಂಬುದನ್ನು ಹೇಳುವ ದಾಸರು "ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ. ಗಂಟನೊಬ್ಬರ ಕೈಯಲ್ಲಿಡುವಾತನೇ ಮೂರ್ಖ, ನೆಂಟರಿಗೆ ಸಾಲವನ್ನು ಕೊಡುವಾತನೇ ಮೂರ್ಖ, ಉಂಡಮನೆಗೆರಡು ಬಗೆವಾತನೇ ಮೂರ್ಖ, ಕೊಂಡೆ ಮಾತನು ಕೇಳಿ ಕುಣಿಯುವವ ಕಡುಮೂರ್ಖ" ಎಂದು ಲೋಕನೀತಿಯನ್ನು ಹೇಳಿದ ದಾಸರು ಆಧ್ಯಾತ್ಮದ ಅತ್ಯುನ್ನತ ಶಿಖರಕ್ಕೇರಿದಾಗಲೂ ಜೀವನದ ವ್ಯಾವಹಾರಿಕ ಸತ್ಯವನ್ನು ನಿರ್ಲಕ್ಷಿಸಲಿಲ್ಲ.

'ದಾಸ್ಯ ಬುದ್ಧಿಯನಿತ್ತು ಸಲಹಯ್ಯ ಹರಿಯೇ' ಎಂದ ದಾಸರು 'ಹರಿದಾಸರು ಭೂತ ದಯಾಪರರಾಗಿರಬೇಕು. ಪಂಚಭೇದವನ್ನರಿತಿರಬೇಕು, ಅರಿಷಡ್ವರ್ಗಗಳನ್ನು ತ್ಯಜಿಸಬೇಕು, ಸಪ್ತವ್ಯಸನಗಳನ್ನು ಅಟ್ಟಬೇಕು, ಅಷ್ಟಮದಗಳನ್ನು ಮೆಟ್ಟಿ ನಿಲ್ಲಬೇಕು. ನವವಿಧ ಭಕುತಿಯಿಂದ ನಾರಾಯಣನಾಮ ಪಾರಾಯಣ ಮಾಡಿ ಜ್ಞಾನ ಪಡೆಯಬೇಕು. ಶಾಂತಿ ಕ್ಷಮಾಗುಣವಿರಬೇಕು ಭ್ರಾಂತಿ ಭ್ರಮೆಗಳನ್ನು ಬಿಟ್ಟಿರಬೇಕು. ಸದಾ ಶಾಂತಪ್ರಶಾಂತ ಪುರಂದರ ವಿಠಲನ ಭವ್ಯ ಮೂರ್ತಿಯನ್ನು ಕಣ್ಣಲ್ಲಿ ತಂದಿರಿಸಿಕೊಳ್ಳಬೇಕು. "ಇರಬೇಕು ಇಲ್ಲದಿರಬೇಕು" ಎಂದು ಸ್ಥಿತಪ್ರಜ್ಞ ದರ್ಶನವನ್ನು ತಿಳಿಸಿಕೊಟ್ಟರು,

ಪುರಂದರದಾಸರು ಸಂಗೀತ ಸಾಮ್ರಾಟರು. ತಾಳ, ತಕ್ಕಮೇಳ, ಶಾಂತ ವೇಳೆ, ಯತಿಪ್ರಾಸ, ಗತಿ, ಗಳ ಶುದ್ಧಿ, ಅರ್ಥಜ್ಞಾನ ಮುಂತಾದ ಸಂಗೀತ ವ್ಯಕ್ತಿತ್ವ ಅವರದು. 'ಆಡಿದನೋ ರಂಗ ಅದ್ಭುತದಿಂದಲಿ' ಎಂಬ ಕೃತಿಯಲ್ಲಿ ನಾಟ್ಯ ಕ್ರಿಯೆಂಬ ನಾಟ್ಯ ಪ್ರಭೂತರಾಗಿದ್ದಾರೆ. ಚೌಕ-ತಾನ ವರ್ಣಗಳನ್ನು ಸುಳಾದಿಗಳನ್ನು ಉಗಾಭೋಗಗಳನ್ನೂ, ತಾಳಾಲಂಕಾರಗಳನ್ನು, ಲಕ್ಷ್ಯಗೀತಗಳನ್ನು ರಚಿಸಿ ಸಂಗೀತದ ಸಂಪೂರ್ಣ ಪ್ರತಿಭಾ ಪಾಂಡಿತ್ಯದ ದರ್ಶನ ಮಾಡಿಸಿದ್ದಾರೆ

ಪುರಂದರದಾಸರು ಸಂಗೀತಗಾರರಿಗೆ ರಸಿಕರಿಗೆ "ತಾಳಮೇಳವಿದ್ದು ಪ್ರೇಮ ವಿಲ್ಲದ ಗಾನ ಕೇಳನೋ ಹರಿ ತಾಳನೋ ಎಂದು ತಿಳಿಸಿದ್ದಾರೆ.

ಪುರಂದರದಾಸರು ರಚಿಸಿರುವ ಕೃತಿಗಳ ಸಂಖ್ಯೆ ಅವರೇ ಹೇಳುವಂತೆ "ಇಂತು ನಾಲ್ಕು ಲಕ್ಷದ ಎಪ್ಪತ್ತೈದು ಸಹಸ್ರ ಕೃತಿಗಳನ್ನು ಕಂತು ಜನಕನ ನಾಮ ಮನಮಹಿಮೆ ಸಂತಸದಿ ಶ್ರುತಿಸ್ಮೃತಿಸಮ್ಮತದಿ" ರಚಿಸಿದ್ದಾರೆ ಅಷ್ಟೇ ಅಲ್ಲದೆ ದ್ರೌಪದೀ-ವಸ್ತ್ರಾಪಹರಣ, ಸುದಾಮ ಚರಿತ್ರೆ, ವರತತ್ವಸಾರ'ಗಳೆಂಬ ಗ್ರಂಥಗಳನ್ನು ಅವರು ರಚಿಸಿದ್ದಾರೆಂಬ ಪ್ರಚಾರವಿದ್ದು ಹೆಚ್ಚಿಗ ಲಭ್ಯವಿಲ್ಲ

ಪುರಂದರದಾಸರ ಪ್ರಭಾವ ಪಲಂಪದ ಪ್ರಭಾವಳಿಯಾಗಿ ಪಲ್ಲವಿಸಿದ ವಿಜಯದಾಸರು ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕ್ರಾಂತಿಯಂತೂ ಅಪೂರ್ವ ಮುಂದೆ ಬಂದ ಗೋಪಾಲದಾಸರು ಜಗನ್ನಾಥದಾಸರಂತೂ ಪ್ರತಿದಾಸರಲ್ಲೂ ಪುರಂದರದಾಸರನ್ನು ನೆನೆಯುವಂತಹ ರೀತಿಯಲ್ಲಿ ಪ್ರಭಾವಿತರಾದವರು

ಪುರಂದರದಾಸರ ಉಪಾಸನಾಮಾರ್ಗ ವಿಶಿಷ್ಟವಾದುದು ನಾವಿನ ಉಪಾಸನೆಗಳ ಪ್ರಾಮಾಣಿಕತಗ ಸಾಕ್ಷಿ ಸ್ವರೂಪವಾಗಿದ್ದ ಪುರಂದರದಾಸರು ಜಗತ್ತಿನಲ್ಲಿ ಸಮ್ಮೆದುರು ಕಾಣುತ್ತಿರುವ ಸಕಲ ಸಂಗತಿಗಳನ್ನು ಸ್ವರೂಪ ಸಾಧನೆಗಳನ್ನೂ ಪ್ರಾಮಾಣಿಕ ಅರ್ಥದಲ್ಲಿ ಗ್ರಹಿಸಿದವರು ಇಂತಹ ಸತ್ಯವಾದ ಜಗತ್ತಿನ ಕಾರಣ ಪುರುಷನೆಂದು ಕರೆಸಿಕೊಳ್ಳುತ್ತಿರುವ ಶ್ರೀಹರಿ ಪುರುಷೋ ಮಹಿಮೆಯ ಸರ್ವೋತ್ತಮ, ಸರ್ವತಂತ್ರ ಸ್ವತಂತ್ರ ಅಗಣಿತ ಗುಣಗಳ ತವನಿಧಿ

ಜೀವವಂತೂ ಜಡದಿಂದ ಸರ್ವಥಾ ಭಿನ್ನ ಜಡಜಡಗಳಲ್ಲೇ ಪರಸ್ಪರ ಭಿನ್ನತೆಯಿರುವಾಗ ಪಂಚಭೇದದ ಸ್ವರೂಪ ಸತ್ಯದ ಬುನಾದಿಯ ಮೇಲೆ ನಿಂತಿದೆ ಇಂತಹ ಸರ್ವೋತ್ತಮನ ಸೇವೆಯನ್ನು ಸದಾಕಾಲ ಮಾಡುತ್ತಿರುವ ಲಕ್ಷ್ಮೀದೇವಿ "ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೋ ಮಾನವರ ಜೀವಕ್ಕೆ ಆಧಾರಭೂತವಾದ ವಾಯುದೇವರು ಶ್ರೀಹರಿಯ ಅಪಾರ ಸೇವೆ ಯನ್ನು ಎಲ್ಲರೊಳಗಿದ್ದು ಮಾಡುತ್ತಿರುವರು.

“ಭಗವಂತ ಕಲ್ಯಾಣಗುಣಪರಿಪೂರ್ಣ, ದೋಷವಿದೂರ, ಇಂದ್ರಿಯಾತೀತ ಆದರೂ ಅಪರೋಕ್ಷ ಜ್ಞಾನಿಗಳಿಗೆ ಗೋಚರ. ಅಪಾರ ಮಹಿಮನಾದ ಅವನು ಮುಕ್ತಿಪ್ರದಾಯಕ, ಅವನ ಅವಯವಗಳೆಲ್ಲಾ ಜ್ಞಾನ ವಿಜ್ಞಾನ ಸುಗಂಧ ಸುದೇಹ” ಜಗತ್ತಿನ ಅಣುರೇಣುಗಳಲ್ಲಿ ಅವನು ಅಂತರ್ಯಾಮಿ

ನಮ್ಮೆಲ್ಲರ ಸಾಕ್ಷಿಗೂ ಜಗತ್ತು ಸತ್ಯವೆಂಬುದು ಗೋಚರಿಸುತ್ತದೆ ಕ್ಷಣಕ್ಷಣದ ನಮ್ಮ ವ್ಯವಹಾರ ನಮ್ಮ ಅಂತರಿಂದ್ರಿಯವಾದ ಸಾಕ್ಷಿಯು ಅನುಭವಕ್ಕೆ ಬರುತ್ತಿದೆ. ಇಂತಹ ಸತ್ಯಪೂರ್ಣವಾದ ಕಲಾತ್ಮಕವಾದ ಅಗಾಧ ಬ್ರಹ್ಮಾಂಡವನ್ನು ಸೃಷ್ಟಿಸಿರುವ ಭಗವಂತನ ಮಹಾತ್ಮೆಯನ್ನು ಅರಿತುಕೊಳ್ಳುವುದೇ ಭಕ್ತಿ. ಅದರಿಂದಲೇ ದಾಸ್ಯಭಾವ ಅದರಿಂದಲೇ ಸರಿಯಾದ ಜ್ಞಾನ. ಸರಿಯಾದ ಜ್ಞಾನದಿಂದಲೇ ಭಕ್ತಿ.

ಈ ಎಲ್ಲ ವಿಷಯಗಳೇ ಪುರಂದರವಾಣಿಯಾಗಿ ಅವರ ಕೃತಿಗಳಲ್ಲಿ ಮೆರೆದಿವೆ. ಆದರಿಂದಲೇ ಪುರಂದರ ಸಾಹಿತ್ಯ, ಜ್ಞಾನವಿಜ್ಞಾನಗಳ ಉತ್ತುಂಗ ಶಿಖರ.

## ಕನಕದಾಸರು

“ಕುರುಬರಾಗಿ ಹುಟ್ಟಿ ಹರಿಶರಣರಾಗಿ ಮೆರೆದ ಕನಕದಾಸರ ಕೀರ್ತನೆಗಳು ಅತ್ಯಂತ ಮೇಲ್ಮಟ್ಟದವು. ಅವರ ಕೀರ್ತನೆಗಳು ಸಾಹಿತ್ಯ ದೃಷ್ಟಿಯಿಂದಲೂ ಶ್ರೇಷ್ಠವಾಗಿವೆ. ಉಳಿದ ಅವರ ಕೃತಿಗಳು ಪರಿಪಕ್ವ ಜೀವನಾನುಭವಕ್ಕೂ, ವಿವೇಕಶೀಲತೆಗೂ, ಸಮದರ್ಶಿತ್ವಕ್ಕೂ ಸ್ವಾತಂತ್ರ್ಯಪ್ರಿಯತೆಗೂ, ಕನ್ನಡಿ ಹಿಡಿಯುತ್ತವೆ [1] ಉಡುಪಿಯಲ್ಲಿ ಶ್ರೀಕೃಷ್ಣ ಇತಿಹಾಸದಲ್ಲೇ ಮೊದಲ ಬಾರಿ ಕನಕದಾಸರ ಭಕ್ತಿಗೆ ಮೆಚ್ಚಿ ವಿಶೇಷಾನುಗ್ರಹ ಮಾಡಿದ “ಕನಕನಕಿಂಡಿ” ಇಂದಿಗೂ ಕನಕದಾಸರ ಭಕ್ತಿಯ ಶ್ರೇಷ್ಠತೆಗೆ ನಿದರ್ಶನವಾಗಿದೆ

---

1. ‘ಅವಲೋಕನ’ (ವಿಶ್ವಕನ್ನಡ ಸಮ್ಮೇಳನ ವಿಶೇಷ ಸಂಚಿಕೆ)
ಡಾ. ಸಿದ್ದಯ್ಯ ಪುರಾಣಿಕ, ಪು ೨೩೦

ಬಾಡಗ್ರಾಮದ ಬಂಕಾಪುರ ಪ್ರಾಂತದ ಢಣಾಯಕ ಬೀರಪ್ಪ ಸುವರ್ಣ ನಿಧಿ ದೊರೆತು ಕನಕನಾಯಕರಾದರು ಕಾಗಿನೆಲೆಯಲ್ಲಿ ಆದಿಕೇಶವನನ್ನು ನೆಲೆಗೊಳಿಸಿದರು, ವರಶತ್ರುಗಳ ಧಾಳಿಗೆ ಸಿಕ್ಕಿದ ಅವರಿಗೆ ವೈರಾಗ್ಯಭಾವ ಸ್ಫುರಿಸಿತು. ಸಕಲ ಅಧಿಕಾರ–ಸಿರಿಸಂಪತ್ತು–ಪದವಿಗಳಿಗ ತಿಲಾಂಜಲಿಯಿತ್ತು ಹರಿದಾಸರಾದರು ಕಾಲಿಗೆ ಗೆಜ್ಜೆಕಟ್ಟಿ, ಕೈಯಲ್ಲಿ ಏಕನಾದ ಹಿಡಿದು ಹೆಗಲಿಗೆ ಕಂಬಳಿಹಾಕಿ ಹೊರಟ ಕನಕದಾಸರಿಗೆ ವ್ಯಾಸರಾಜರು ಮಾರ್ಗದರ್ಶಕರಾದರು. ಹರಿಭಕ್ತಿಯ ಹರಿಕಾರರಾದ ಕನಕದಾಸರು ಕೀರ್ತನೆ, ಷಟ್ಪದಿ, ಸಾಂಗತ್ಯ ಕಾವ್ಯಗಳನ್ನು ಮಧುರಮನೋಹರ ಶೈಲಿಯಲ್ಲಿ ಹಾಡಿ ಭಗವಂತನನ್ನು ಕೊಂಡಾಡಿದರು

ಕನಕದಾಸರು ಬರೆದ ಕೃತಿಗಳಲ್ಲೆಲ್ಲಾ ಜಾನಪದದ ಮೊರೆತವಿದೆ ಗ್ರಾಮ್ಯದ ಗಮ್ಮತ್ತಿದೆ ವಿದ್ವಾಂಸರ ಪಾಂಡಿತ್ಯವಿದೆ ರಸಿಕರ ನವರಸಗಳಿವೆ 'ಹರಿಭಕ್ತಿಸಾರ' ನೂರಾಹತ್ತು ಪದ್ಯಗಳ ಸಾರಾಸಾರ ಇಡೀಕಾವ್ಯ ಭಕ್ತನ ಹೃದಯದಿಂದ ಉಕ್ಕಿ ಹರಿದ ಆರ್ತಭಾವದ ಮೊರೆತವಾಗಿದೆ ಭಾಮಿನೀಷಟ್ಪದಿಯ ಮಂಜುಳ ಪ್ರವಾಹದಲ್ಲಿ ಹೊಮ್ಮಿ ಹರಿದಿರುವ ಇದರಲ್ಲಿ ತತ್ವದ ರತ್ನಗಳು ಚಿಮ್ಮಿವೆ. 'ರಾಮಧಾನ್ಯ ಚರಿತ್ರೆ' ಎಂಬ ಅವರ ಕೃತಿ ಆ ಕಾಲಕ್ಕೆ ಕನಕದಾಸರಿಗಿದ್ದ ವಿಚಾರ ಧಾರೆಯನ್ನೂ, ಸಾಮಾಜಿಕ ಕಳಕಳಿಯನ್ನೂ ಸೂಚಿಸುತ್ತದ 'ನಳಚರಿತ್ರೆ' ಕಾವ್ಯ ಕನಕದಾಸರ ಕುಶಲ ಕಥನಕಲೆಗಾರಿಕೆಯನ್ನೂ. ಕಾವ್ಯ ಮಾಧುರಿಯನ್ನೂ ಅರಳಿಸುತ್ತದೆ.

'ಮೋಹನತರಂಗಿಣಿ' ಕನಕದಾಸರ ಮಹತ್ವದ ಕೃತಿ ಇದೊಂದು ಅಮರ ತರಂಗಿಣಿಯಾಗಿದೆ "ಹಲವು ಜನುಮದಿ ತಾಯಿ ಎನಗಿತ್ತ ಮೊಲೆ ಹಾಲು ನಲಿದುಂಬಾಗ ಹನಿ ನೆಲಕೆ ಬಿದ್ದಿದ್ದು ಕೂಡಿ ಅಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲೋ" ಎಂಬಲ್ಲಿಯೂ "ಪಂಚೇಂದ್ರಿಯಂಗಳೆಂಬ ಮಂಚಿಗೆಯ ಹಾಕಿರಯ್ಯಾ ಚಂಚಲವೆಂಬ ಹಕ್ಕಿಯ ಓಡಿಸಿರಯ್ಯಾ ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಶಿಯನ್ನು ಅಳೆಯಿರಯ್ಯಾ" ಎಂದು ಹೇಳುವಲ್ಲಿಯೂ ಕನಕದಾಸರ ಕಲ್ಪನಾ ಕೌಶಲ್ಯ ಮನತೋಷಮಹೀಯವಾಗಿ ವಿಜೃಂಭಿಸುತ್ತದೆ "ಭಾವವಿಪ್ಲವ ಜಕ್ಕುಳಿ ಫಿಮಿದು ಕುಂಭಕಳಮುಕುತಿ" "ಗಾಳಿ

ಗೊಡ್ಡಿನ ಸೊಬಗು ಈ ಸಂಸಾರ ಮುಂತಾದ ಅವರ ಮಾತುಗಳಲ್ಲಿ ಮಿಂಚಿನ ಶಕ್ತಿಯಿದೆ

ಹೃದಯಕ್ಕೆ ನಾಟುವಂತಹ ಮಾರ್ಮಿಕವಾದ ದೃಷ್ಟಾಂತಗಳಿಂದ, ಮಿಂಚಿನ ಪ್ರತಿಭೆಯ ಕಾವ್ಯಶಕ್ತಿಯಿಂದ. ಜಾಣ್ನುಡಿ ನಾಣ್ನುಡಿಗಳ ತತ್ವ ಸತ್ವ ಸಾರಗಳ ಮಹತ್ವದಿಂದ. ಜಗದ ಜನತೆಯನ್ನು ನಿದ್ರೆಯಿಂದ ಎಚ್ಚರಗೊಳಿಸುವ ಚೈತನ್ಯದ ಜಾಗೃತಿಯಿಂದ ಕನಕದಾಸರ ಕೀರ್ತನೆಗಳು ಸುಪ್ರಸಿದ್ಧವೆನಿಸಿವೆ ಮುಚ್ಚಿ ಹೋಗಿದ್ದ ಸಮಾಜದ ಭಕ್ತಿಕೋಟೆಯಲ್ಲಿ ತಮ್ಮದೇ ಆದ ವಿಶಿಷ್ಟ ಕನಕನ ಕಿಂಡಿಯನ್ನು ತೆರೆದು ತೋರಿಸಿ, ಸಾಮಾಜಿಕ ಭಕ್ತಿ ಚೇತನದ ಪುನರುತ್ಥಾನದ ಕಾರಣಪುರುಷರಾದರು ಕನಕದಾಸರು

ಭಕ್ತಿಯಿಂದ ಸದಾಯುಕ್ತರಾಗಿ, ಸಂಸಾರ ಬಂಧನದಿಂದ ಮುಕ್ತರಾಗಿ ವೈರಾಗ್ಯಭಾವದ ವಿರಕ್ತರಾಗಿ, ವ್ಯಾಸರಾಜ, ವಾದಿರಾಜ, ಪುರಂದರದಾಸರ ಪ್ರೀತಿಪಾತ್ರರಾಗಿ ಕಾಗಿನೆಲೆಯ ದೈವದ ನೇತ್ರರಾಗಿ, ದುರ್ಬಲವರ್ಗಗಳ ಜನತೆಯಲ್ಲಿ ನೈತಿಕಮೌಲ್ಯಗಳ ಪುನಃಪ್ರತಿಷ್ಠಾಪಕರಾಗಿ ಕಂಗೊಳಿಸಿದ ಶ್ರೇಷ್ಠ ಚೇತನರು ಕನಕದಾಸರು

ತೊಂಬತ್ತೆಂಟು ವರ್ಷಗಳ ಕಾಲ ಬದುಕಿದ್ದ ಕನಕದಾಸರು ಭಕ್ತಿಜ್ಞಾನ ವೈರಾಗ್ಯಗಳನ್ನು ಪ್ರಚಾರಪಡಿಸುತ್ತಾ, ಭಕ್ತಿ ಪಂಥದ ತತ್ವವಿಚಾರಗಳನ್ನು ಭಕ್ತ ಜನ ಕರ್ಣರಸಾಯನವಾಗಿ ಪ್ರತಿಪಾದಿಸುತ್ತಾ, ಪಾಮರವರ್ಗದಲ್ಲೂ, ಜನ ಸಾಮಾನ್ಯರಲ್ಲೂ ಭಗವದ್ಭಕ್ತಿಯ ಭವ್ಯ ಚಿಂತನೆಯನ್ನು ಬಿತ್ತಿದರು.

ಕನಕದಾಸರನ್ನು ಕಂಡರೆ ಆ ಕಾಲದಲ್ಲೂ ಅನೇಕ ಜನ ಪಂಡಿತರಿಗೆ ಕುಬುದ್ಧಿ, ಕುಹಕ, ಕುಯುಕ್ತಿಗಳಿದ್ದು, ಕೆಲವರಂತೂ ಕನಕನನ್ನು ಕಂಡರೆ ಕುಚೇಷ್ಟೆ ಮಾಡುತ್ತಿದ್ದರು ಮಡಿಗೆ ಅಡಿಯಾಳುಗಳಾಗಿದ್ದ ಕೆಲವರು ಅಸಹನೆ ಅಸೂಯೆಗಳಿಂದ ಕುದಿಯುತ್ತಿದ್ದರು. ಇದನ್ನು ಕಂಡ ಪುರಂದರದಾಸರು "ಕನಕದಾಸನ ಮೇಲೆ ದಯೆಮಾಡಲು ವ್ಯಾಸ । ಮುನಿಮಠದ ಜನರೆಲ್ಲ ದೂರಿಕೊಂಬುವರೋ । ನೋಡಿರೊ ಈ ಕನಕನಾಡುವ ಮಾತುಗಳ । ಮೂಢ ಜನರರಿಯಬಲ್ಲರೇ ಮಹಿಮೆಯ । ನಾಡಾಡಿಯಂತೆಯೇ ಮಾಡಿಬಿಟ್ಟರು,

ಇವಗೆ। ನಾಡೆಲ್ಲ ಹುಡುಕಿದರು ಇವಗೀಡಾರ ಕಾಣೆ' ಎಂದು ನಿದರ್ಶನ ಸಹಿತ ಹಾಡಿ ಕನಕದಾಸರ ಮಹತ್ವವನ್ನು ಸಾರಿ, ಸಣ್ಣ ಜನಗಳ ಕೀಳರಿಮೆಯನ್ನು ಬಯಲಿಗೆಳೆಯುತ್ತಾರೆ ಇಂತಹ ಅಪಾರ ಅಸೂಯೆ ಮತ್ಸರಬುದ್ಧಿಯ ಕುತ್ಸಿತ ಪರಿಸರದಲ್ಲಿದ್ದೂ, ಪರಿಶುಭ್ರ ವ್ಯಕ್ತಿಯಾಗಿ, ಪುಟಕ್ಕಿಟ್ಟ ಚಿನ್ನದಂತೆ ಹರಿದಾಸ ಸಮುದಾಯಕ್ಕೆ ಶೋಭೆಯಾಗಿ ಕಂಗೊಳಿಸಿದವರು ಕನಕದಾಸರು. ಪುರಂದರದಾಸರು, ವ್ಯಾಸರಾಜರು, ತಮ್ಮ ಸಮಕಾಲೀನ ಸಾಮಾಜಿಕ ಸಾಹಿತ್ಯಿಕ ಹಾಗೂ ಭಕ್ತಿ ಪ್ರಪಂಚದಲ್ಲಿ ಕನಕನ ಘನತೆ ಶ್ರೇಷ್ಠತೆಯನ್ನು ಸಾರಿ ಸಾರಿ ತೋರಿಸಿದರು.

ಕನಕದಾಸರು ತಮ್ಮ ಕೀರ್ತನೆಗಳ ಮೂಲಕ ಕರ್ನಾಟಕದ ಹಳ್ಳಿಹಳ್ಳಿಗಳಲ್ಲಿ ಜನಮನವನ್ನು ತಟ್ಟಿದರು ಅವರ ಹೃದಯದಾಳವನ್ನು ಮುಟ್ಟಿ ಭಕ್ತಿಯ ಬೀಜವನ್ನು ನೆಟ್ಟರು ಕುಲದಿಂದ ಕುರುಬನಾದರೂ ಗುಣದಿಂದ ಘನಜ್ಞಾನಿಗಳಾದ ಕನಕದಾಸರು "ಆತ ಒಲಿದ ಮೇಲೆ ಯಾತರ ಕುಲವಯ್ಯ" "ಕುಲಕುಲಕುಲವೆಂದು ಹೊಡೆದಾಡದಿರಿ. ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ" ಎಂದು ಪ್ರಶ್ನಿಸಿ, ಈ ಕಾಲದ ಸಾಮಾಜಿಕ ಸಮಸ್ಯೆಗಳನ್ನು ಕುರಿತೇ ಆಡಿರುವಂತೆ, ಸಮಾಜವನ್ನು ಉನ್ನತಿಗೇರಿಸಲು ಪ್ರಯತ್ನಿಸಿದರು ಕನಕದಾಸರು ವಿನೀತ ಭಾವನೆ, ವಿನಮ್ರತೆ, ವಿನಯಗಳ ಅಕ್ಷಯನಿಧಿ. 'ದಾಸದಾಸರ ಮನೆಯ ದಾಸಿಯರ ಮಗ ನಾನು' ಎಂದು ಹೇಳುವ ದಾಸರು 'ಎಂಜಲ ಪರಿವಾಣಗಳ ಬೆಳಗುವೆ. ಕಂಜನಾಭನ ಪಾದಗಳ ತೊಳೆವೆ, ರಂಜಿಪಕುಸುಮ ಮಾಲಿಕೆಗಳ ತರುವ, ನಂಜೆಗ ವಂಜಿಸ ದಾಸನಾಗಿರುವ ಎಂದು ತ್ರಿಕರಣ ಶುದ್ಧಿಯಿಂದ ಹರಿದಾಸ ದೀಕ್ಷೆಯನ್ನು ಸ್ವೀಕರಿಸಿದವರು ಅಂತರಂಗ ಬಹಿರಂಗ ವ್ಯಾಪಾರಗಳೆಲ್ಲವನ್ನು ಬಲ್ಲ ಕನಕದಾಸರು "ತೀರ್ಥವನ್ನು ಪಿಡಿದವರೆಲ್ಲಾ ತಿರುನಾಮಧಾರಿಗಳೇ, ಜನ್ಮ ಸಾರ್ಥಕವಿಲ್ಲದವರೆಲ್ಲಾ ಭಾಗವತರೇ ಜಪವಮಾಡಿದರೇನು. ತಪವಮಾಡಿದರೇನು ಕಪಟಗುಣ ವಿಪರೀತವಿದ್ದವರು' ಎಂದು ಡಂಭಾಚಾರ ಬೂಟಾಟಿಕೆ, ಒಣವೇದಾಂತಗಳನ್ನು ಖಂಡತುಂಡವಾಗಿ ಖಂಡಿಸಿದರು ಪ್ರತಿಯೊಬ್ಬರ ಆಟಗಳನ್ನು ಹೋರಾಟವನ್ನು. ಕನಕದಾಸರು

'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಒಂದೇ ಮಾತಿನಲ್ಲಿ ಬಿಚ್ಚಿಟ್ಟರು

ಕನಕದಾಸರು ಅನೇಕ ದೃಷ್ಟಿಗಳಿಂದ ಕ್ರಾಂತದರ್ಶಿಗಳು ವರ್ತಮಾನಗಳಿಂದ ಬಂದ ಸಂಪ್ರದಾಯಬದ್ಧ ನಿಲುವನ್ನೇ ಪ್ರಶ್ನಿಸುವ ಕೆಚ್ಚಿದ್ದ ಅವರು 'ಅಪುತ್ರಸ್ಯಾ ಗತಿರ್ನಾಸ್ತಿ' ಎಂಬ ಶಾಸ್ತ್ರ ವಿಚಾರಧಾರೆಯನ್ನು ಅಲ್ಲಗಳೆಯುತ್ತಾ "ಮಗ ನಿಂದ ಗತಿಯುಂಟೆ ಜಗದೊಳು ನಿಗಮಾರ್ಥ ತತ್ವವಿಚಾರದಿಂದಲ್ಲವೇ" ಎನ್ನುತ್ತಾ "ಸತ್ಯನೊಬ್ಬ ಮಗ,ಶಾಂತನೊಬ್ಬ ಮಗ, ದುರ್ವೃತ್ತಿ ನಿಗ್ರಹನೊಬ್ಬ ಮಗ, ಸಮಚಿತ್ತನೊಬ್ಬನು ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ ಹೆತ್ತರೇನು. ಇನ್ನು ಹೆರದಿದ್ದರೇನಯ್ಯಾ" ಎಂದು ಹೇಳಿ "ಸುತರಿಲ್ಲದವರಿಗೆ ಸದ್ಗತಿ ಇಲ್ಲವೆಂಬ ಕೃತಕಶಾಸ್ತ್ರವು ಲೌಕಿಕಭಾವಕೆ ಎಂದು ಸಾರುತ್ತಾರೆ

ಕನಕದಾಸರ ಮುಂಡಿಗೆಗಳಂತೂ ಜಗತ್ಪ್ರಸಿದ್ಧ ಮೇಧಾವಿಗಳಿಗೊಂದು ಸವಾಲು "ಕನಕನನ್ನು ಕೆಣಕಬೇಡ, ಕೆಣಕಿ ತಿಣಕಬೇಡ" ಎಂಬ ಗಾದೆಯ ಮಾತೇ ಇದಕ್ಕೆ ಸಾಕ್ಷಿ

ಕನಕರ ಕೀರ್ತನೆಯ ಪ್ರತಿವಾಕ್ಯಗಳು ನಮ್ಮೆಲ್ಲರ ದಿನನಿತ್ಯದ ಬದುಕಿನ, ನಡೆವಳಿಕೆಯತ್ತ ಉಪದೇಶಾಮೃತವಾಗಿ ಪರಿಣಮಿಸಿವೆ "ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು" 'ಸಿರಿಬಂದ ಕಾಲಕ್ಕೆ ಒಲು ಮರೆಯಬೇಡ' "ಅಜ್ಞಾನಿಗಳ ಕೂಡ ಅಧಿಕಸ್ನೇಹಕ್ಕಿಂತ ಸುಜ್ಞಾನಿಗಳ ಕೂಡ ಜಗಳ ಲೇಸು" ಒಕ್ಕಲಿಲ್ಲದ ಊರು ಕೊಳೆತುನಾರುವ ನೀರು' ಮುಂತಾದ ವಾಕ್ಯಗಳು ಸುಭಾಷಿತಗಳಂತಿವೆ ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವ "ಸುಖದುಃಖೇ ಸಮೇಕೃತ್ವಾ" ಎಂಬುದನ್ನು ಕನಕದಾಸರು "ತನು ನಿನ್ನದು ಜೀವನ ನಿನ್ನದು ಅನುದಿನದಲ್ಲಿ ಬಾಹೋ ಸುಖದುಃಖ ನಿನ್ನದಯ್ಯ" ಎಂದು ತಮ್ಮ ದಿನನಿತ್ಯದ ಬದುಕಿನ ಕಷ್ಟಸುಖಗಳನ್ನು ಭಗವಂತನಲ್ಲಿ ಅರ್ಪಿಸುತ್ತಾರೆ.

ತಮ್ಮ ಎಲ್ಲ ಕೃತಿಗಳಲ್ಲೂ ಶ್ರೀಕೃಷ್ಣಪರಮಾತ್ಮನ ಸರ್ವವ್ಯಾಪಕ ಶಕ್ತಿಯನ್ನು ಉಜ್ವಲವಾಗಿ ಬಣ್ಣಿಸುವ ಕನಕದಾಸರು, ಅಹಂಕಾರ ದಮನದಿಂದ ಹರಿಕೀರ್ತನೆಯ ಬಲದಿಂದ, ಚಿತ್ತಪ್ರಶಮನವಾಗಿ, ಬುದ್ಧಿಯ ದಿವ್ಯಗುಣ

ಅದ್ಭುತ ಅಲೌಕಿಕ ಶಕ್ತಿಯೊಡನೆ ಸ್ಪಂದಿಸಿ, ದೈವಾನುಗ್ರಹ ಪೂರ್ಣವಾದ ಆಧ್ಯಾತ್ಮಿಕ ಶೃಂಗದ ಕಡೆಗೆ ವ್ಯಕ್ತಿತ್ವ ಹೊಳಯುತ್ತಾ ಹೊರಳುತ್ತದೆ ಎಂದು ನುಡಿಯುತ್ತಾರೆ ತಮ್ಮ ಉದಾತ್ತತೆ, ಭಾವಸೂಕ್ಷ್ಮತೆ, ಕಲಾತ್ಮಕತೆ, ಆಧ್ಯಾತ್ಮಿಕ ತತ್ವಘನತೆ, ಹಾಗೂ ಸಾಹಿತ್ಯಿಕ ಶ್ರೀಮಂತಿಕೆಗಳಿಂದ ಕನಕದಾಸರು ಶತಮಾನಗಳ ನಂತರವೂ ಸೀಮಾಪುರುಷರಾಗಿಯೇ ನಿಲ್ಲುತ್ತಾರೆ ಎತ್ತರಕ್ಕೆ ಬೆಳೆಯಬೇಕೆನ್ನುವ ಹಂಬಲ ಇರುವವರೆಲ್ಲರಿಗೂ ದಾರಿದೀಪದಂತಿರುವ ಕನಕದಾಸರು ಸಹಾನುಭೂತಿ. ಲೋಕಕಾರುಣ್ಯಗಳ ಅಪರಿಮಿತ ಭಂಡಾರವನ್ನೇ, ಸುಜೀವಿಗಳಿಗ ಧಾರೆಯೆರೆದಿದ್ದಾರೆ ಅವರ ಹರಿಭಕ್ತಿಸಾರದಲ್ಲಿ ಬರುವ "ದೀನ ನಾನು, ಸಕಲಲೋಕಕ್ಕೆ ದಾನಿ ನೀನು ಅಜ್ಞಾನಿ ನಾನು, ಮಹಾಮಹಿಮ ನೀನು ಜ್ಞಾನಪೂರ್ಣ ವಾಯಿಯಾದ ಈ ನನ್ನನ್ನು ಒಮ್ಮೆ ವಿಷಯ ಸುಖವನ್ನು ಬೋಗಿಸುವ ಇನ್ನೊಮ್ಮೆ ಪ್ರಿಯವಸ್ತುವಿನ ಪ್ರಾಪ್ತಿಗಾಗಿ ಹಂಬಲಿಸುವ, ಮತ್ತೊಮ್ಮೆ ದೀನದಲಿತರ ಬಗ್ಗೆ ಕ್ರೂರನಾಗಿ ವರ್ತಿಸುವ ಮಗದೊಮ್ಮೆ ಕಾಮಕ್ರೋಧಾದಿಗಳಿಗ ವಶನಾಗಿ ಮನಬಂದ ಆಚಾರವಾಗ ನೇಹ ತೀರಿಸಿಕೊಳ್ಳಲು ಹಾತೊರೆಯುವ, ಈ ನನ್ನನ್ನು ರಕ್ಷಿಸುವ ಹೊಣೆ ನಿನ್ನದಯ್ಯಾ ಎಂದು ಶ್ರೀಹರಿಯಲ್ಲಿ ಮೊರೆಯಿಡುತ್ತಾ ಹೇಳುವ ಮಾತುಗಳು ಎಲ್ಲ ಕಾಲಕ್ಕೂ ನಿಲ್ಲಬಲ್ಲ ದಿವ್ಯಸತ್ಯವಾಗುತ್ತವೆ

ಕನಕದಾಸರು ಹೊರನೋಟಕ್ಕೆ ಏಕನಾದ ಹಿಡಿದು ಹಾಡುತ್ತಾ ಹೊರಟ ಭಿಕ್ಷುಗಳಂತೆಯೇ ಕಂಡರೂ ಅವರ ಉದಾತ್ತ ಕೀರ್ತನೆಗಳ ಮೂಲಕ ಹೊಮ್ಮಿ ಬಂದ ತಾತ್ವಿಕ ಸತ್ಯಗಳು ಅವರ ಕೀರ್ತಿಯನ್ನು ಚಿರಂತನವಾಗಿಸಿವೆ ಮೋಹ ಮದಮತ್ಸರಗಳಲ್ಲಿ ಮೈಮರೆತ ಜೀವ, ಕನಕರ ಕಟುಸತ್ಯದ ವರ್ಣನೆಯ ಮೇಲೆ ಅಂತರ್ಮುಖಿಯಾಗಿ ತನ್ನ ಬದುಕಿನ ದಾರಿ, ಕಾಣಬೇಕಾದ ಗುರಿಯತ್ತ ನಡೆಯತೊಡಗುತ್ತದೆ ಕನಕರ ಬಾಯಿಂದ ಬಂದ ಮುಕ್ತಕಗಳು ಎಲ್ಲ ಕಾಲಕ್ಕೂ ಆಧ್ಯಾತ್ಮಿಕ ಮುಕ್ತಾಫಲಗಳಾಗಿದ್ದು ಗ್ರಹಿಸಬಲ್ಲ ಹೃದಯಗಳಿಗೆ ಭಗವದ್ಭಕ್ತಿಯನ್ನು ಪ್ರೇರಿಸಬಲ್ಲ ಉದ್ದೀಪಕಶಕ್ತಿ ಸಾಮರ್ಥ್ಯದ ನುಡಿ ಕಿಡಿಗಳಾಗುತ್ತವೆ

**ವಿಜಯದಾಸರು**

ಉಳಿದವರು ಹತ್ತು ಮಾತುಗಳಲ್ಲಿ ಹೇಳುವುದನ್ನು ಹರಿದಾಸರು ಒಂದು ಮುತ್ತುಮಾತಿನಲ್ಲಿ ಹೇಳಿದರು. ಮತ್ತೆ ಮತ್ತ ಮಾಧವನ ಸ್ಮರಣೆ, ಸ್ಮರಣೆಯೊಂದೇ ಸಾಲದೆ ಮುಕ್ತಿಗೆ. ಮುಕ್ತಿಮಂಟಪಕ್ಕೆ ಭಕ್ತಿಯ ಮೆಟ್ಟಿಲುಗಳು, ಮೆಟ್ಟಿಲುಗಳನ್ನು ಪುರಂದರರೊಡನೆಯೇ, ಅವರ ಬೆನ್ನ ಹಿಂದೆಯೇ ಹತ್ತಿ ಬಂದ ವಿಜಯೀದಾಸರೆಂದರೆ ವಿಜಯದಾಸರು, ನಿರಕ್ಷರ ಕುಕ್ಷಿ ದಾಸಪ್ಪ ಅಂಕಿತದ ಆಶೀರ್ವಾದದಿಂದಾಗಿ ಅಪರೋಕ್ಷ ಜ್ಞಾನಿ ವಿಜಯದಾಸರಾದರು ವಿಜಯದಾಸರಿಂದ ಹೊಮ್ಮಿದ ಪ್ರತಿಪದ್ಯ ವೇದವಾಕ್ಯಗಳಾದುವು ವೇದ ಉಪನಿಷತ್ತು ಭಾಗವತ್ತು ಪುರಾಣ ಸೂತ್ರಗಳೆಲ್ಲಾ ಧಾರೆಧಾರೆ ಹೊಮ್ಮಿಬಂತು. ಪುರಂದರರ ಪ್ರಭಾವ ಪ್ರವಾಹಕ್ಕೆ ವಿಜಯದಾಸರು ಚೈತನ್ಯದ ಜಲಪಾತವಾದರು. ವಿದ್ಯುದ್ವೇಗದಿಂದ ಸಂಚರಿಸುತ್ತಿತ್ತು ದಾಸರ ಬುದ್ಧಿ ದಾಸರ ಒಳಿ ದಾಸಾನುದಾಸರಾದವರಿಗೆಲ್ಲಾ ದೊರಕಿತ್ತು ಸಿದ್ಧಿ ಅವರ ಪದವಿನ್ಯಾಸಕ್ಕೆ ಸಿಕ್ಕು ಶಿಲ್ಪವಾಗಿತ್ತು ಯುಗಯುಗಗಳ ಸುದ್ದಿ

ವಿಜಯದಾಸರು ಜ್ಞಾನಪ್ರದರು ಧ್ಯಾನಪ್ರದರು ಮೌನಪ್ರದರು. ಮೌನಪ್ರದರು ಆನಂದತೀರ್ಥರ ವ್ಯಾಸಸಾಹಿತ್ಯವನ್ನೂ, ಶ್ರೀಪಾದರಾಜರ ದಾಸಸಾಹಿತ್ಯವನ್ನೂ ಶ್ರೇಷ್ಠಪದದಲ್ಲಿ ಸಹಸ್ಪಂದಿಸಿದ ವಿಜಯಗುರುಗಳು ದಾಸಸಾಹಿತ್ಯದ ಭೀಷ್ಮರು. ದಾಸಸಂಸ್ಕೃತಿಯ ಪಾಂಡಿತ್ಯ, ಪ್ರತಿಭೆ, ಸತ್ವ, ಮಹತ್ವ, ಶಾಸ್ತ್ರಸಂಪನ್ನತೆಗಳನ್ನು ಪ್ರಚಂಡ ಬೀಸಿನಲ್ಲಿ ತಮ್ಮದನ್ನಾಗಿಸಿಕೊಂಡು, ಆ ಮೂಲಕ ಇಡೀ ಆಸ್ತಿಕಲೋಕವೇ ಚೈತನ್ಯದ ಮಹಾಶಕ್ತಿಯಾಗುವಂತೆ ಪ್ರೇರೇಪಿಸಿದ ವಿಜಯದಾಸರು ದಾಸವಾಙ್ಮಯದ ಅನರ್ಘ್ಯ ಭಂಡಾರ. ಜ್ಞಾನಮೇರುಗಿರಿಯಾಗಿದ್ದ ಶ್ರೀ ವಿಜಯದಾಸರು ದಾಸಸಾಹಿತ್ಯದ ಧ್ವಜವನ್ನು ಗಗನದೆತ್ತರಕ್ಕೆ ಎತ್ತಿ ಹಾರಿಸಿದ ವಿಜಯೋಲ್ಲಾಸ ದಾಸಶ್ರೇಷ್ಠರು ಸಾಹಿತ್ಯ ಹಾಗೂ ಭಕ್ತಿಪ್ರಪಂಚಗಳೆರಡರಲ್ಲಿಯೂ ವರ್ಣರಂಜಿತ ವಿಕ್ರಮವನ್ನು ಸ್ಥಾಪಿಸಿದ ಸರಸ್ವತೀ ಕಂಠಾಭರಣ ವಿಶಿಷ್ಟರು ಶ್ರೀ ವಿಜಯದಾಸರು. ರಸಸಿದ್ಧಿ ಹಾಗೂ ವಾಕ್‌ಸಿದ್ಧಿಗಳ ವಿಜಯದಾಸರು ಮಧ್ವಸಿದ್ಧಾಂತದ ಶಾಸ್ತ್ರ ಪ್ರಮೇಯಗಳನ್ನು ಸಕಲ ಸಜ್ಜನ ಸದ್ವೈಷ್ಣವರಿಗೂ ಅರ್ಥವಾಗುವ ರೀತಿಯಲ್ಲಿ ಅಭಿವ್ಯಕ್ತಿಸಿ

ನವಮನ್ವಂತರವೊಂದನ್ನು ನಿರ್ಮಿಸಿದ ಮಹಾಮನೀಷಿಗಳು ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು ಮುಂತಾದ ಮಹತೋಮಹೀಯರನ್ನು ಮನುಕುಲದ ಉದ್ಧಾರಕ್ಕಾಗಿ ಕಾಣಿಕೆಯನ್ನಾಗಿ ನೀಡಿದ ದಾಸ ಸಾಮ್ರಾಟರು ಭೃಗುಮಹರ್ಷಿಗಳಾಗಿ, ಮಧ್ವಪತಿಯಾಗಿ, ವಿಜಯದಾಸರಾಗಿ, ಕಾಲಕಾಲಕ್ಕೂ ಭಕ್ತಿಭಾಗೀರಥಿಯ ನಿರಂತರ ಪ್ರವಾಹಕ್ಕೆ ಕಾರಣೀಭೂತರಾಗಿ, ದಾಸಪರಿಸರದಲ್ಲಿ ವಿದ್ವತ್ತಿನ ವಿದ್ಯುತ್‌ಶಕ್ತಿಯ ಮಿಂಚಿನ ಸಂಚಾರ ಮಾಡಿಸಿ ಅಖಂಡ ಸಂತುಷ್ಟಿ ಸತ್ಪರಂಪರೆಗಳನ್ನು ಧಾರೆಯೆರೆದ ಪುಣ್ಯ ಪುರುಷರು. ಪ್ರಚಂಡಪಾಂಡಿತ್ಯ, ಸರಸಕವಿತ್ವ, ಅದ್ಭುತವೈರಾಗ್ಯ ಅನುಪಮ ಭಕ್ತಿ, ಅಪಾರ ಜ್ಞಾನಗಳ ಅಕ್ಷಯನಿಧಿಗಳಾಗಿದ್ದ ವಿಜಯದಾಸರು ಮೋಹನದಾಸರನ್ನು ಸಾಕಿ, ಆರೈಕೆ ಹಾರೈಕೆಗಳ ಮೂಲಕ ಚಿರಂಜೀವಿಗಳನ್ನಾಗಿ ಮಾಡಿದ ಮಹಾನುಭಾವರು ಸುಳಾದಿ ಕೀರ್ತನೆಗಳು ಓತಪ್ರೋತವಾಗಿ ಸದಾ ಹೊಮ್ಮುತ್ತಿದ್ದ ಜನಿಸುವ ಭವ್ಯ ವಿಶ್ವಕೋಶವಾಗಿದ್ದ ವಿಜಯದಾಸರು ದಾಸಸಾಹಿತ್ಯ–ವ್ಯಾಸಸಾಹಿತ್ಯಗಳೆಂಬ ಜೋಡಿ ಹಕ್ಕಿಗಳು ಬೀಡುಬಿಟ್ಟಿದ್ದ ಗೂಡು ಸರ್ವಜ್ಞಾಚಾರ್ಯರ ಸಮಸ್ತ ಸಿದ್ಧಾಂತವೂ ಸಮರ್ಥವಾಗಿ ಸು-ಳಾದಿ ರೂಪದಲ್ಲಿ ಅಡಿ ಸಲಿದು ಒಲಿದು ಜನಸಾಮಾನ್ಯರನ್ನು ಎತ್ತರಿಸಿದ ದಿವ್ಯ ರಂಗಭೂಮಿ ಉದಾತ್ತ ಪ್ರಪಂಚದ ಅತ್ಯುನ್ನತ ಶಿಖರವನ್ನೇರಿಸಿರುವ ವಿಜಯದಾಸರು ಸಾಹಿತ್ಯದ ಪರಮೋಚ್ಚ ಶೃಂಗವನ್ನು ಮುಟ್ಟಿದ ಮೇರು ಪುರುಷರು ವಿಜಯದಾಸರು ನಂಬಿದವರ ಕಾಮಧೇನು ಆರಾಧಿಸುವವರ ಕಲ್ಪವೃಕ್ಷ

ರಾಯಚೂರು ಜಿಲ್ಲೆಯ ಚೀಕಲಪರವಿ ಎಂಬಲ್ಲಿ ಜನಿಸಿ ಕಡುಬಡತನದ ಬೇಗೆಯಲ್ಲಿ ಬೆಂದು, ಒಪ್ಪತ್ತಿನ ಊಟಕ್ಕಿಲ್ಲದ ಅಪಮಾನಿತನಾಗಿ ದೇಶಾಂತರ ಹೊರಟ ದೀನ, ದೂನ, ಬಾಲಕ ದಾಸಪ್ಪ, ಊರೂರು ಅಲೆಯುತ್ತಾ ಕಾಶಿಗೆ ಬಂದಾಗ ಅಲ್ಲಿ ಒಂದು ರಾತ್ರಿ ಶ್ರೀ ಪುರಂದರದಾಸರ ಸ್ವಪ್ನ ದರ್ಶನವಾಯಿತು ಶ್ರೀ ಹರಿಯೇ ಸ್ವತಃ ಶ್ರೀ ಪುರಂದರದಾಸರ ವೇಷದಿಂದ ಬಂದು ದಾಸಪ್ಪನನ್ನು ಗಂಗೆಯ ಆಚೆಯ ದಡದ ವ್ಯಾಸಕಾಶಿಗೆ ಕರೆದೊಯ್ದು ವೇದವ್ಯಾಸರ ದರ್ಶನ ಮಾಡಿಸಿದನು ದಾಸಪ್ಪನ ನಾಲಿಗೆಯ ಮೇಲೆ 'ವಿಜಯ' ಎಂಬ ಬೀಜಾಕ್ಷರಗಳನ್ನು ಒರೆದು ಅದೃಶ್ಯನಾದನು

ಅಂದಿನಿಂದ ದಾರಿದ್ರ್ಯದ ಪೀಠಸ್ಥಿತಿಯಲ್ಲಿದ್ದ ನಿರಕ್ಷರಕುಕ್ಷಿ ದಾಸಪ್ಪ ವಿಜಯವಿಠಲ ಅಂಕಿತದ ವಿಜಯದಾಸರಾದರು. ದಾಸಪ್ಪನ ಗುಡಿಸಲು ವಿಜಯದಾಸರ ಮಠವಾಯಿತು. ಸರ್ವಜ್ಞ ಸಿದ್ಧಾಂತದ ಸಮಸ್ತ ಶಾಸ್ತ್ರ ವಿಚಾರಗಳೂ ಮಿದುಳಿನಲ್ಲಿ ತುಳುಕಾಡಿದವು. ನಾಲಿಗೆಯ ತುದಿಯಲ್ಲಿ ನಾರಾಯಣ ನಾಮಸ್ಮರಣೆ ನಲಿದಾಡಿತು. ನುಡಿದದ್ದೆಲ್ಲಾ ನಾದಮಾಧುರ್ಯದ ಕಾವ್ಯಪ್ರಭವವಾಗಿ, ಹೇಳಿದ್ದೆಲ್ಲಾ ಹರಿಸರ್ವೋತ್ತಮತ್ವದ ಹಾಡುಗಳಾಗಿ, ಉಂಡುಟ್ಟು ಉಸಿರಾಡಿದ್ದೆಲ್ಲಾ ಉಗಾಭೋಗಗಳಾಗಿ, ತಲೆಯಲ್ಲಿ ಸುಳಿದದ್ದೆಲ್ಲಾ ಸುಳಾದಿಗಳಾದವು.

ಪುರಂದರ ಕನಕರಿಂದ ಭಕ್ತಿಭಾವ ಭಾಗೀರಥಿಯಾಗಿ ಹರಿದು ಬಂದ ದಾಸಸಾಹಿತ್ಯ ಸುಧೆ, ವಿಜಯದಾಸರಿಂದ ಶಾಸ್ತ್ರ ವಿಚಾರ ಪ್ರಮೇಯ ಪ್ರಣಾಳಿಕೆಗಳ ಪರಿಪೂರ್ಣ ಪ್ರಕಟಣೆಯಲ್ಲಿ ಫಲ ಕೊಟ್ಟಿತು. ಅಂದು ರಾಯಚೂರು ಪ್ರದೇಶದಲ್ಲಿ ಶ್ರೀ ವಿಜಯದಾಸರು ಹಚ್ಚಿಟ್ಟ ದಾಸದೀವಿಗೆ ಇಂದಿಗೂ ದೇದೀಪ್ಯಮಾನವಾಗಿ ಉರಿಯುತ್ತಾ ಜ್ಞಾನಭಕ್ತಿ ವೈರಾಗ್ಯಗಳ ತವನಿಧಿಯನ್ನಾಗಿ ಆ ಪ್ರದೇಶವನ್ನು ಕಾಯ್ದುಕೊಳ್ಳುತ್ತಾ ಬಂದಿದೆ.

ಶ್ರೀ ವಿಜಯದಾಸರು ರಾಜಾಧಿರಾಜರಿಂದ ಸನ್ಮಾನಿತರಾದರೂ ಸಕಲ ಸೌಭಾಗ್ಯ ಸಂಪತ್ತನ್ನು ಶ್ರೀರಮಣನ ಪದಚರಣಗಳಲ್ಲರ್ಪಿಸಿ ॥ ನಿನ್ನ ಒಲುಮೆಯಿಂದ । ನಿಖಿಳ ಜನರು ಬಂದು, ಮನ್ನಿಸುವರೊ ಮಹಾರಾಯ ॥ ಎನ್ನ ಪುಣ್ಯಗಳಿಂದ ಈ ಪರಿಯುಂಟೇನೋ ನಿನ್ನದೇ ಸಕಲಸಂಪತ್ತು ॥ ಎಂದು ಹೇಳಿ ಸಂಜೆತನಕ ಇದ್ದು ಸಣ್ಣಸೌಟು ತುಂಬ ಗಂಜಿ ಕಾಣದೆ ಬಳಲಿದೆನೋ ಹಿಂದೆ ಎಂದು ಪರಮಾತ್ಮನ ಅದ್ಭುತ ಶಕ್ತಿಯನ್ನು ಕೊಂಡಾಡಿದರು. ಕಲ್ಲೂರು ಸುಬ್ಬಣ್ಣಾಚಾರ್ಯರಂತಹ ಸುಧಾಪಾರದ ಶಾಸ್ತ್ರರತ್ನಾಕರರೆದುರಿಗೇ ಒಬ್ಬ ನೀರಿನ ಪರಿಚಾರಕನ ಕೈಹಿಡಿದು ಅವನಿಂದ ನಿರರ್ಗಳವಾಗಿ ಅಸ್ಖಲಿತ ಸುಧಾ ಅನುವಾದ ತರಂಗಿಣೀ ಪ್ರವಾಹವನ್ನು ಹರಿಸಿ ಸುಬ್ಬಣ್ಣಾಚಾರ್ಯರಿಗೆ ಸ್ವರೂಪ ಜ್ಞಾನ ಮೂಡಿಸಿ 'ವ್ಯಾಸವಿಠಲ' ಎಂಬ ಅಂಕಿತದಿಂದ ದಾಸದೀಕ್ಷೆಯನ್ನು ನೀಡಿದರು. ತಮ್ಮ ಪ್ರಭಾವಪೂರ್ಣ ಪ್ರವಾಸ ಸಂದರ್ಭದಲ್ಲಿ ಸಹಸ್ರ ಸಹಸ್ರ ಜನರ ಅಂತರಂಗದ ಕಣ್ಣುಗಳನ್ನು ತೆರೆಸಿ ತಮ್ಮ ದಿವ್ಯಜ್ಞಾನ, ಭಗವದ್ಧ್ಯಾನ, ಅಮೃತಗಾನ, ಸುಧಾ

ವಾಸದಿಂದ ಆಧ್ಯಾತ್ಮ ಜಗತ್ತಿನ ಹೊಸ ದಿಗಂತಗಳನ್ನು ಅಭೂತಪೂರ್ವವೆನ್ನುವಂತೆ ಪ್ರಸರಿಸಿದರು 'ಭಕ್ತಿಯಲಿ ಭಾಗಣ್ಣ' ಎಂದೇ ಲೋಕ ವಿಖ್ಯಾತರಾದ ಶ್ರೀ ಗೋಪಾಲದಾಸರಂತಹ ಗಾಯತ್ರಿ ಮಂತ್ರಸಿದ್ಧಿಯ ಪುರುಷರನ್ನು ದಾಸ ವಿಭೂತಿಗಳನ್ನಾಗಿಸಿದರು ಆದವಾನಿಯ ಪಂಗನಾಮದ ತಿಮ್ಮಣ್ಣ ದಾಸರಿಗೆ ವೇಣುಗೋಪಾಲವಿಠಲ ಎಂಬ ಅಂಕಿತವನ್ನು ಕೊಟ್ಟು ಅವರ ಸ್ವರೂಪದರ್ಶನ ಮಾಡಿಸಿ ಕೃತಕೃತ್ಯರನ್ನಾಗಿಸಿದರು

ಪುರಂದರದಾಸರ ನಂತರ ಒಂದು ಶತಮಾನಗಳ ಕಾಲ ತಣ್ಣಗಾಗಿದ್ದ ದಾಸಸಾಹಿತ್ಯದ ತೇಜೋರಾಶಿಯನ್ನು ಮತ್ತೆ ಉದ್ದೀಪಿಸಿ, ದಾಸಸಾಹಿತ್ಯದ ಪುನರುತ್ಥಾಪಕರಾದರು ಪುರಂದರದಾಸರು ೪,೭೫,೦೦೦ ಕೃತಿಗಳನ್ನು ರಚಿಸಿದ ಅಖಂಡ ಕೀರ್ತಿಗೆ ಭಾಜನರಾಗಿದ್ದರೆ ಅದಕ್ಕೆ ತಮ್ಮ ಇಪ್ಪತ್ತೈದು ಸಹಸ್ರ ಕೃತಿಗಳನ್ನು ಕೂಡಿಸಿ, ಐದು ಲಕ್ಷ ಕೃತಿಗಳನ್ನು ಕನ್ನಡನಾಡಿನ ಶ್ರೀಮಂತ ಸಾಹಿತ್ಯ ಭಂಡಾರಕ್ಕೆ ಕಾಣಿಕೆಯಾಗಿತ್ತರು ಶಾಸ್ತ್ರಗರ್ಭಿತವಾದ ಪ್ರಮೇಯ ಪ್ರಪಂಚವೆನಿಸುವ, ವಿಚಾರಪ್ರದವಾದ, ಜಯಪ್ರದವಾದ ವಿಜಯದಾಸರ ಕೀರ್ತನೆ, ಸುಳಾದಿಗಳು ಭಾರತೀಯ ಆಧ್ಯಾತ್ಮ ಸಂಸ್ಕೃತಿಯ ಅಮೂಲ್ಯ ಆಸ್ತಿ.

"ದುರಿತರಾಶಿಯ ಬಿಡಿಸು, ದುಸ್ಸಂಗವನು ಕೆಡಿಸು, ನಿರುತ ನಿನ್ನವರೊಳಗೆ ಸುಖಬಡಿಸೋ, ಪರಮವಚನವ ನುಡಿಸು, ಸನ್ಮಾರ್ಗದಲಿ ನಡೆಸು, ಪರಮರಹಸ್ಯ ಉಪದೇಶ ಕೊಡಿಸು, ಚರಣದಲ್ಲಿ ರತಿಯಿಡಿಸು, ನಾಮಾಮೃತವ ಕುಡಿಸು, ಪರಿಪರಿಕ್ಲೇಶ ಬಂಧನವ ಕೆಡಿಸು, ಸ್ಥಿರಭಕುತಿಯನು ಪಿಡಿಸು ನಿರ್ಮಾಲ್ಯವನು ಮುಡಿಸು, ಪರಪ್ರಸಾದಕೆ ಮನ ಒಡಂಬಡಿಸು, ಕರಣ ರಕ್ಷಕ ಶರ್ವ ವಿಜಯ ವಿಠಲ ನಿನ್ನ ಕರುಣ ಕವಚವ ತೊಡಿಸು ಜನನ ಎಡೆಗೆಡಿಸು ಎಂದು ನಿರ್ಮಲಾಂತಃಕರಣದಿಂದ ಸ್ವಾಮಿಯನ್ನು ಮಗುವಿನಂತೆ ಬೇಡುವ ವಿಜಯದಾಸರು "ಪಾಪವೆಂಬ ಗರಳದಲ್ಲಿ ಪರಿತಾಪಪಡುತ್ತೇನೆ ಶ್ರೀಪತಿಯೆ ನಿನ್ನ ನಾಮ ಲೇಪಿಸೆನ್ನ ನಾಲಿಗೆಗೆ' ಎಂದು ಭಗವಂತನನ್ನೇ ಪ್ರಾರ್ಥಿಸಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು. ತನಗ ದಾಸಾಳವಾಗಿ ದೊರೆಯುವಂತೆ ಈ ಕೃತಿಯಲ್ಲಿ ಕೇಳಿಕೊಳ್ಳುತ್ತಾರೆ "ನಿನ್ನ ನೋಡುವಲ್ಲಿ ಕಾಮವೇ ಎನಗಿರಲಿ, ನಿನ್ನ ಬಿಡೆನೆಂಬೋ ಲೋಭವೇ ಎನಗಿರಲಿ, ನಿನ್ನ

ದ್ವೇಷರ ಕೂಡ ಕ್ರೋಧವೇ ಎನಗಿರಲಿ, ನಿನ್ನ ಕೊಂಡಾಡುವವರ ಸಂಗವೇ ಎನಗಿರಲಿ, ನಿನ್ನವನೆಂಬೋ ಕೀರುತಿವೊಂದಿರಲಿ, ನಿನ್ನ ಕೂಡಾಡುವ ಆಟವೇ ಎನಗಿರಲಿ, ನಿನ್ನ ಅಹಿತವಾದ ವಂಚನೆ ಎನಗಿರಲಿ, ನಿನ್ನ ಮೂರುತಿ ವಿಜಯವಿಠ್ಠಲ ಸಂಪನ್ನ."

ಆನಂದತೀರ್ಥರಿಂದ ಪ್ರಣೀತವಾದ ಸಕಲ ಸಿದ್ಧಾಂತಗಳ ಸಾರವನ್ನೂ, ಸಾರೋದ್ಧಾರವಾಗಿ ವಿಜಯದಾಸರು ತಮ್ಮ ಸುಳಾದಿಗಳಲ್ಲಿ ಮೆರೆದಿದ್ದಾರೆ ವಿಜಯರಾಯರ ವಾಗ್ವಿಲಾಸ ಅನವದ್ಯವಾಗಿ, ಸಾಹಿತ್ಯ ಶೃಂಗದ ರಸನಿಮಿಷ ಗಳಾಗುತ್ತಾರೆ, ತಮ್ಮ ಮಧ್ವಮತದ ಬಗೆಗಿನ ಸುಳಾದಿಗಳನ್ನು ಸಾರುವಾಗ ಹರಿನಾಮ ಮಹಿಮೆಯನ್ನು ಹಾಗೂ ಹರಿದಾಸರ ಶ್ರೇಷ್ಠತೆಯನ್ನೂ ಹಿಗ್ಗಿ ಹಿಗ್ಗಿ ಹಬ್ಬದ ಸಂಭ್ರಮ ಸಡಗರಗಳಿಂದ ಹಾಡಿ ಕುಣಿಯುತ್ತಾರೆ ವಿಜಯ ರಾಯರು. 'ದಾಸದಾಸದಾಸರ ದಾಸ್ಯವಕೊಡೋ ದೋಷರಾಶಿಯನುಳಿದು' ಎಂದು ಕೇಳುವ ವಿಜಯರಾಯರು ತಿರುಪತಿಯಲ್ಲಿ ವೆಂಕಟೇಶ್ವರನ ದರ್ಶನವಾಗ ದಿದ್ದಾಗ ಮಾರ್ಮಿಕವಾಗಿ "ನಿನ್ನ ದರುಶನಕೆ ಬಂದವನಲ್ಲವೋ ದೇವಾ, ನಿನ್ನ ಭಕುತರ ದಿವ್ಯ ಚರಣ ನೋಡಲು ಬಂದೆ' ಎಂದು ಹೇಳುತ್ತಾ "ಒಲಿದು ಭಕ್ತರಿಗಾಗಿ ಮದುವೆ ಹವಣಿಸಿಕೊಂಡ, ಸುಲಭ ದೇವರದೇವ ವಿಜಯವಿಠಲ ರೇಯ" ಎಂದು ಶ್ರೀನಿವಾಸನನ್ನೇ ಛೇಡಿಸುತ್ತಾರ.

ಬದುಕಿನಲ್ಲಿ ವಿಜಯದಾಸರು ಇಟ್ಟಿದ್ದ ಅನುಸಂಧಾನ ಹರಿದಾಸ ಜನಾಂಗಕ್ಕೇ ಆದರ್ಶಪ್ರಾಯ. "ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ, ಉಂಡು ಉಟ್ಟದ್ದೆಲ್ಲ ವಿಷ್ಣುಪೂಜೆ, ತಂಡ ತಂಡದ ವಾರ್ತೆ ಪಾರಿಜಾಕ್ಷನ ಕೀರ್ತಿ, ಹಿಂಡುಮಾತುಗಳೆಲ್ಲ ಹರಿಯನಾಮ, ಹಿಡಿದ ಹಠ ಪೂರೈಸಲದು ಹರಿಯ ಸಂಕಲ್ಪ, ನಡೆದಾಡುವೋದೆಲ್ಲ ತೀರ್ಥಯಾತ್ರೆ, ಬಡತನವು ಬರಲದೇ ಭಗವದ್ಧ ಜನಯೋಗ. ಸಡಗರದಲಿಪ್ಪುದೇ ಶ್ರೀಶನಾಜ್ಞೆ' ಎಂದು ನಿತ್ಯಜೀವನದಲ್ಲಿಯ ಪ್ರತಿ ವಿಷಯ ವಸ್ತುಗಳಲ್ಲಿ ಭಗವಂತನ ಸಾನ್ನಿಧ್ಯವನ್ನು ಕಂಡ ಭಾಗವ ತೋತ್ತಮ ಶ್ರೇಷ್ಠರು ಶ್ರೀ ವಿಜಯದಾಸರು.

ವಿಜಯದಾಸರು ತಂಜಾವೂರಿ ಮೀಟಿದೆಡೆಯಲ್ಲೆಲ್ಲಾ, ಪುರಂದರ ವಾಣಿ

ವಿಜಯವಾಣಿಯಾಗಿ ಮೊರೆದಿದೆ ಅವರ ಪದಪದ್ಯಗಳಲ್ಲಿ. ಪ್ರಭಾವಶಾಲೀ ಪ್ರಮೇಯ ಸಿದ್ಧಾಂತಗಳು ಅರಳಿ ಆನಂದತೀರ್ಥರಿಗೆ ಆರತಿ ಎತ್ತಿವೆ. ದಾಸ ಸಾಮಗ್ರಿಯ ಸದ್ವಾದಾಗಲೆಲ್ಲಾ ಸುಳಾದಿಗಳ ರತ್ನಾಭಿಷೇಕವಾಗಿದ. ಅನಂತ ಕೋಟಿ, ಸೂರ್ಯಪ್ರಭೆಯ ಶ್ರೀ ಹರಿಗೆ ಶಾಸ್ತ್ರಾರ್ಥ ವಿಚಾರಗಳ ರಸಕಾರಂಜಿಯಾಗಿ ಚಿಮ್ಮಿವೆ ವಿಜಯದಾಸರ ಕೀರ್ತನೆಗಳು.

ಹರಿಸರ್ವೋತ್ತಮತ್ವವನ್ನು, ವಾಯುಜೀವೋತ್ತಮತ್ವವನ್ನು, ತತ್ವಾಭಿಮಾನಿ ದೇವತೆಗಳ ತಾರತಮ್ಯ ಕಕ್ಷೆಗಳನ್ನೂ, ತೀರ್ಥಕ್ಷೇತ್ರ ಮಹಿಮಾ ಹಾಗೂ ಅದರ ಅಭಿಮಾನಿ ದೇವತೆಗಳನ್ನೂ. ಅಂತರ್ಯಾಮಿ, ದೇವತೆಗಳನ್ನೂ. ಭಕ್ತಿಯ ಸ್ವರೂಪ, ಮುಕ್ತಿಯ ವೈಭವ. ಜ್ಞಾನದ ವೈಶಿಷ್ಟ್ಯ, ವೈರಾಗ್ಯದ ಸಾಧನ, ಭಗವತ್ ಚಿಂತನೆಯ ಬದುಕನ್ನೂ ತಮ್ಮ ಹರಿದಾಸ ಸಾಹಿತ್ಯದ ಸುಂದರ ಉದ್ಯಾನವನದಲ್ಲಿಯ ಅಮೃತಕಮಲಗಳಂತೆ ಅರಳಿಸಿದ್ದಾರೆ ಮಹಾನುಭಾವರಾದ ವಿಜಯದಾಸರು

ಅಪಮೃತ್ಯುವನ್ನು ನಿವಾರಿಸಿ, ವಂರಸಿಂದ ಸಂಧಾವರ್ಣಮಾಡಿ, ಸಂಚಾರಕ್ರಮದಲ್ಲಿ ಲಕ್ಷಾಂತರ ಬ್ರಾಹ್ಮಣ ಸುವಾಸಿನಿಯರ ಸಂತರ್ಪಣೆ ನಡೆಸಿ, ಪರವಾದಿ ನಿಗ್ರಹ ಶಕ್ತಿ ವಿಶಿಷ್ಟರಾಗಿ, ವೈಷ್ಣವದೀಕ್ಷಾ ದಕ್ಷ ಶ್ರೇಷ್ಠರಾಗಿ, ಮೆರೆದ ಸಿದ್ಧಿಪುರುಷರು ಶ್ರೀ ವಿಜಯದಾಸರು ದಾಸರ ತಪಸ್ಸಿನ ಶಕ್ತಿ ಲೋಕೋತ್ತರ ಪ್ರಖ್ಯಾತವಾಗಿ, ಆ ಧವಳಕೀರ್ತಿ ದಿಗಂತವಿಶ್ರಾಂತವಾಯಿತು. ತಮ್ಮ ಅಪಾರ ಕರುಣಾಶಕ್ತಿಯಿಂದ ಪಂಡಿತ ಪ್ರಕಾಂಡ ಶ್ರೀನಿವಾಸಾಚಾರ್ಯರನ್ನು ಸಂಪೂರ್ಣ ಅನುಗ್ರಹಿಸಿ, ಹರಿಕಥಾಮೃತಸಾರದ ಅಮರ ಕವಿ ಜಗನ್ನಾಥದಾಸರನ್ನಾಗಿ ಮಾಡಿದರು ಶ್ರೀ ವಿಜಯದಾಸರು. ಭಾಷೆಯ ಶುದ್ಧಿ, ಭಕ್ತಿಯ ಸಿದ್ಧಿ, ಕಾವ್ಯ ಸಮೃದ್ಧಿಗಳ ಅತ್ಯದ್ಭುತ ರಸಪಾಕವಾಗಿರುವ ವಿಜಯದಾಸರ ಸುಳಾದಿಗಳು ಹರಿದಾಸ ಜಗತ್ತಿನ ವಿಜಯಸ್ತಂಭಗಳು. ಶಬ್ದ, ಅರ್ಥ, ಶಾಸ್ತ್ರಗಳೆಲ್ಲಾ ವಿಜಯದಾಸರ ಸೇವೆಗಾಗಿ ಕೈಕಟ್ಟಿ ನಿಂತಿರುವ ರೀತಿಯ ಸಾಹಿತ್ಯ ವಿಜಯದಾಸರ ಸಾಧನೆ. ಸಂಸ್ಕೃತದ ಶಾಸ್ತ್ರೀಯ ಸಿದ್ಧಾಂತಗಳ ಕಷ್ಟ ಕ್ಲಿಷ್ಟತೆಯನ್ನು, ಕನ್ನಡದ ಸುಲಭಸುವರ್ಣ ಸುಳಾದಿಯ ಜೇನಿನಲ್ಲಿ ಸೂಸಿ. ದಾಸಸಾಹಿತ್ಯದ ರಸದೋಕುಳಿಯನ್ನಾಡಿ ಭಕ್ತಿರಸದ ಚಿರಂತನ ಚಿಲುಮೆಯ

ಸ್ಫೂರ್ತಿಗೊಳಿಸಿದ ಚೈತನ್ಯದ ಜಲಪಾತ ಶ್ರೀ ವಿಜಯದಾಸರು. ವಿಜಯದಾಸರ ಪ್ರತಿ ಪದಪದ್ಯದಲ್ಲಿಯೂ ಸಮೃದ್ಧ ಜೀವಂತಿಕೆಯಿದ್ದು, ಶಬ್ದಸ್ವಾಮಿತ್ವ, ಭಾವಪ್ರಭುತ್ವ, ಭಕ್ತಿಗುರುತ್ವಗಳು ಪ್ರವಾಹದೋಪಾದಿಯಲ್ಲಿ ಹರಿದು, ಬೀಜಾಕ್ಷರಗಳ ಭವ್ಯ ಭಕ್ತಿಸಾಹಿತ್ಯ ಪರಂಪರೆಯನ್ನೇ ಮುಂದಿನ ಜನಾಂಗಕ್ಕೆ ಬಳುವಳಿಯಾಗಿ ನೀಡಿದರು.

ಜ್ಞಾನ, ಭಕ್ತಿ ವೈರಾಗ್ಯಗಳ ಪರಿಪೂರ್ಣ ಸಾಧನೆಯ ದಿವ್ಯ ಪ್ರತ್ಥಳಿ, ದಾಸ ವ್ಯಾಸಸಾಹಿತ್ಯಗಳ ತಪನಿಧಿ ದಾಸವ್ಯಾಸ ಸಾಹಿತ್ಯ ಸಾಮ್ರಾಜ್ಯ ಮಕುಟ ಮಣಿ, ಶ್ರೀ ವಿಜಯದಾಸರು.

## ಗೋಪಾಲದಾಸರು

ಗೋಪಾಲದಾಸರು ಭಕ್ತಿ ಪ್ರಪಂಚ ವಿಹಾರಿಗಳು. ಭಕ್ತಿಯ ಉಪಾಸನಾ ಮಾರ್ಗದಲ್ಲಿ ಅವರ ಕಾವ್ಯಶಕ್ತಿ ಭೋರ್ಗರೆದಿದೆ. ಭಕ್ತಿಸ್ವರೂಪವೇ ಮೈವೆತ್ತಿಬಂತ ಗೋಪಾಲದಾಸರು ಭಗವಂತನನ್ನು ತಮ್ಮ ಸುಳಾದಿಗಳಲ್ಲಿ ಸಾಕ್ಷಾತ್ಕರಿಸಿಕೊಂಡಿದ್ದಾರೆ. ಲೌಕಿಕ ಜಗತ್ತಿನ ಸಕಲ ಚರಾಚರವಸ್ತುವೈವಿಧ್ಯಗಳೆಲ್ಲ ಭಕ್ತಿಯ ಉದ್ದೀಪನೆಗಾಗಿ, ಭಗವಂತನ ಸೇವೆಗಾಗಿ, ದೊರೆತ ದಿವ್ಯ ಸಾಮಗ್ರಿಗಳಾಗಿವೆ ಗೋಪಾಲದಾಸರಿಗೆ. ಭಕ್ತಿಪ್ರಪಂಚದ ವಿಶಾಲ ವೇದಿಕೆಯಲ್ಲಿ ದಾಸರದಾಸರಾಗಿ ಬಂದು ವಿಜಯದಾಸರು ತೋರಿಸಿದ ರಾಜ ಮಾರ್ಗದಲ್ಲಿ ನಡೆದು, ಭಕ್ತಿಯ ಎಲ್ಲ ದಾರಿಗಳನ್ನು ಭಗವಂತನೆಡೆಗೆ ತೋರಿಸಿ ಪ್ರಾಸಾದಿಕವಾಣಿಯಿಂದ ಇಡೀ ತಮ್ಮ ಸಾಹಿತ್ಯವನ್ನು ಆನಂದತೀರ್ಥ ಪರಿಮಳ ಭರಿತ ಕವಾಕುಸುಮವನ್ನಾಗಿ ಮಾಡಿ ಭಗವಂತನಿಗೆ ಸಮರ್ಪಿಸಿರುವ ಶ್ರೀ ಗೋಪಾಲದಾಸರಂತಹ ಭಕ್ತಕವಿ ಕನ್ನಡದಲ್ಲಿ ಬೇರೊಬ್ಬರಿಲ್ಲ. ಭಕ್ತಿಯಲಿ ಭಾಗಣ್ಣ, ಎಂದೇ ಲೋಕ ವಿಖ್ಯಾತರಾದ, ಖ್ಯಾತಾಭಿಗೀತರಾದ, ಶ್ರೀ ಗೋಪಾಲದಾಸರು ಶ್ರೀ ವಿಜಯದಾಸರ ಪ್ರಮುಖ ಶಿಷ್ಯರಲ್ಲಿ ಪ್ರಥಮರು.

ರಾಯಚೂರು ಜಿಲ್ಲೆಯ ದೇವದುರ್ಗದ ಬಳಿಯ ಮೊಸರುಕಲ್ಲು ಎಂಬ ಗ್ರಾಮದಲ್ಲಿ ಮುರಾರಿರಾಯ ಮತ್ತು ವೆಂಕಮ್ಮನವರ ಪುತ್ರನಾಗಿ ಬೆಳೆದ

ಭಾಗಣ್ಣ, ಬದುಕಿನಲ್ಲಿ ಬಡತನದ ಬಿಸಿ ಕಡುಕಷ್ಟ ಯಾತನೆಗಳನ್ನು ಚಿಕ್ಕ ವಯಸ್ಸಿನಲ್ಲಿಯೇ ಅನುಭವಿಸಬೇಕಾಯಿತು. ದಾರಿದ್ರ್ಯದ ದುಃಖ ಪರಂಪರೆಗಳು ಪರ್ವತಪ್ರಾಯವಾಗಿ ಬಂದವು. ತಾಯಿ ಹಾಗೂ ತಮ್ಮಂದಿರೊಡನೆ ಉತ್ತನೂರಿಗೆ ಬಂದು ಅಲ್ಲಿಯ ಪ್ರಾಣದೇವರ ಗುಡಿಯಲ್ಲಿ ನೆಲೆಸಿದರು. ನಿವಾಸಸ್ಥಾನಗಳಿಲ್ಲದ ಭಾಗಣ್ಣ ಉಪನಯನದ ನಂತರ ಗಾಯತ್ರೀ ಮಂತ್ರದ ಜಪತಪಾನುಷ್ಠಾನದಲ್ಲಿ, ಇಡೀ ತನ್ನ ಚಿತ್ತವೃತ್ತಿಯನ್ನು ಏಕಾಗ್ರಗೊಳಿಸಿ ಎರಡು ವರ್ಷಗಳ ಕಾಲ ನಿರಂತರ ಸಾಧನ ಮಾಡಿದ. ಗಾಯತ್ರಿ ಪುರಶ್ಚರಣದಿಂದ ಪ್ರಸನ್ನಳಾದ ವೇದಮಾತೆ ಸುಪ್ರಸನ್ನಳಾಗಿ ಭಾಗಣ್ಣನ ನಾಲಿಗೆಯಲ್ಲಿ ಬೀಜಾಕ್ಷರಗಳನ್ನು ಮೂಡಿಸಿದಳು. ಗಾಯತ್ರಿ ಸಿದ್ಧಿಯಿಂದ ಬರುಬರುತ್ತಾ ಭಾಗಣ್ಣನ ಬಾಯಿಂದ ಬಂದ ನುಡಿಗಳೆಲ್ಲ ನಿಜವಾಗತೊಡಗಿದುವು. ಭವಿಷ್ಯ ಹೇಳತೊಡಗಿದ ಭಾಗಣ್ಣನ ಭಾಗ್ಯದ ಬಾಗಿಲು ಭವ್ಯವಾಗಿ ತೆರೆದುಕೊಂಡಿತು. ಸರಸಕವಿತ್ವ, ಕಲಾಕೌಶಲ್ಯ, ಮಂತ್ರಗಳೆಲ್ಲ ಸಮೃದ್ಧವಾಗಿ ಸಿದ್ಧಿಯಾಗಿ, ಭಾಗಣ್ಣ ವರಕವಿಯೆನಿಸಿದನು. ಈ ಮಾತುಗಳು ದೇಶವಿದೇಶ ಹರಡಿ ಕಡೆಗೆ ಗದ್ವಾಲ ಸಂಸ್ಥಾನದ ದೊರೆ ರಾಜಾರಾಮನು ಭಾಗಣ್ಣನಲ್ಲಿ ಭವಿಷ್ಯ ಕೇಳಲು ಬಂದನು. ಭಾಗಣ್ಣನ ವಾಕ್ಸಿದ್ಧಿಗೆ ಬೆರಗಾಗಿ ಭೂಮಿಕಾಣಿಕೆ ಕೊಡುಗೆಗಳನ್ನು ಭಕ್ತಿಪೂರ್ವಕ ಸಮರ್ಪಿಸಿದನು. ತ್ರಿಕಾಲ ಜ್ಞಾನಿಯಾದ ಭಾಗಣ್ಣನು ಆದವಾನಿಯ ದಿವಾನರಾಗಿದ್ದ ತಿಮ್ಮಣ್ಣರವರ ಬಳಿ ಅತಿಥಿಯಾಗಿ ಕೆಲಕಾಲ ಕಳೆಯಬೇಕಾಯಿತು. ಆಗ ವೆಂಕಟಕೃಷ್ಣ — ಅಂಕಿತದಿಂದ ಕೆಲವು ಹಾಡುಗಳನ್ನು ರಚಿಸಿ ಹಾಡುತ್ತಿದ್ದನು. ಆ ಸುವರ್ಣ ಸಂದರ್ಭದಲ್ಲಿಯೇ ಅಪರೋಕ್ಷ ಜ್ಞಾನಿಗಳಾದ ವಿಜಯದಾಸರ ದಿವ್ಯದರ್ಶನವಾಗಿ, ಭಾಗಣ್ಣನಿಗೆ ತನ್ನ ಬದುಕಿನ ಬಾನಿನಲ್ಲಿ ಹೊಳೆಮಿಂಚೊಂದು ಸ್ಫುರಿಸಿದಂತಾಗಿ. ಅವರ ಹಾರೈಕೆಯ ಅಮೃತಸ್ಪರ್ಶದಿಂದ ಪುನೀತನಾದಂತೆನ್ನಿಸಿ, ಅವರಿಂದ "ಗೋಪಾಲವಿಠಲ" ಎಂಬ ಅಂಕಿತವನ್ನು ಪಡೆದು ಅನುಗ್ರಹಿತರಾದರು. ಅಂಕಿತ ಪಡೆದೊಡನೆಯೇ ನೂರಾರು ಕೀರ್ತನೆ ಸುಳಾದಿಗಳನ್ನು ನಾದಮಾಧುರ್ಯ ಹಾಗೂ ಭಕ್ತಿಗಾಂಭೀರ್ಯದಿಂದ, ತಮ್ಮ ಪ್ರಾಸಾದಿಕವಾಣಿಯಿಂದ ರಚಿಸಿ, ವಿಜಯದಾಸರ ಪ್ರೀತಿಯ ವಿಶ್ವಾಸ ವಾತ್ಸಲ್ಯಗಳಿಗೆ ಪಾತ್ರರಾದರು. ತಮ್ಮ ತಮ್ಮಂದಿರಾದ ಸೀನಪ್ಪದಾಸರಿಗೆ, ದಾಸಪ್ಪದಾಸರಿಗೆ, ರಂಗಪ್ಪದಾಸರಿಗೆ ಅನುಕ್ರಮವಾಗಿ

ವರದ ಗೋಪಾಲವಿಠಲ, ಗುರು ಗೋಪಾಲವಿಠಲ, ಹಾಗೂ ತಂದೆ ಗೋಪಾಲ ವಿಠಲ ಎಂಬ ಅಂಕಿತಗಳನ್ನು ನೀಡಿ ಅವರೂ ಕೀರ್ತನಕಾರರಾಗಲು ಪ್ರೇರೇಪಿಸಿದರು. ವಿಜಯದಾಸರ ಶಿಷ್ಯಕೋಟಿಯಲ್ಲಿ ಪ್ರಮುಖರಾಗಿದ್ದ ಗೋಪಾಲದಾಸರು ಗುರುಭಕ್ತಿ, ಹರಿಭಕ್ತಿಗಳ ಗಾನ, ಧ್ಯಾನ ಹಾಗೂ ಭಕ್ತಿವಿಧಾನಗಳ ತಮ್ಮ ಮಾರ್ಗದಲ್ಲಿ ನೂರಾರು ಜನ ಹರಿದಾಸರುಗಳನ್ನು ಕರೆದೊಯ್ದು ಅಪೂರ್ವ ಗುರುಕಾಣಿಕೆಯನ್ನರ್ಪಿಸಿದರು

ಹರಿಕಥಾಮೃತಸಾರದಂತಹ ತತ್ವರತ್ನಾಕರವನ್ನು ಆಸ್ತಿಕ ಜನಸಮುದಾಯಕ್ಕೆ ಕಾಣಿಕೆಯನ್ನಾಗಿತ್ತ, ಶ್ರೀ ಜಗನ್ನಾಥದಾಸರಿಗೆ, ಗುರುಗಳಾದ ವಿಜಯದಾಸರ ಆದೇಶದಂತೆ ತಮ್ಮ ಆಯುಷ್ಯದಲ್ಲಿ ನಲವತ್ತು ವರ್ಷಗಳನ್ನು ದಾನ ಮಾಡಿದ ತ್ಯಾಗಮೂರ್ತಿಗಳಾಗಿ ಕಲಿಯುಗ ಕರ್ಣರೆನಿಸಿಕೊಂಡರು

ಕೃಷ್ಣಭಕ್ತೆಯಾಗಿದ್ದ ಬೆಳವಾಕಪ್ಪ ಗಿರಿಯಮ್ಮನಿಗೆ ಅವಳು ಹಾಕಿದ ರಂಗೋಲಿಯಲ್ಲಿಯೇ ಶ್ರೀ ಕೃಷ್ಣನನ್ನು ಸಾಕ್ಷಾತ್ಕರಿಸಿ ತೋರಿಸಿದರು ತಮ್ಮ ಸಮಯೋಚಿತ ಕಾವ್ಯ ಕಲ್ಪನಾ ಚಾತುರ್ಯ, ತತ್ವಪ್ರವಾಹದ ಗಾಂಭೀರ್ಯ, ಸರಳ ಸುಂದರ ಭಾಷಾ ಮಾಧುರ್ಯ ಹಾಗೂ ಅರ್ಥ ಸೌಂದರ್ಯದಿಂದ ಮತ್ತು ಎಲ್ಲಕ್ಕೂ ಹೆಚ್ಚಾಗಿ ಪೌರಾಣಿಕ ದೃಷ್ಟಾಂತಗಳ ಕೀರ್ತನೆ ಸುಳಾದಿಗಳಿಂದ ವೆಂಕಟರಾಮಾಚಾರ್ಯರನ್ನು ದಾಸಸಾಹಿತ್ಯದ ಕಡೆಗೆ ತಿರುಗಿಸಿ, ವಾಸುದೇವ ವಿಠಲ ಎಂಬ ಅಂಕಿತ ನೀಡಿ ಅನುಪಮ ಹರಿದಾಸರನ್ನಾಗಿ ಮಾಡಿದರು ವಾಸುದೇವವಿಠಲರೇ ಮುಂದೆ ವ್ಯಾಸತತ್ವಜ್ಞರೆಂದು ಖ್ಯಾತರಾಗಿ, ಮಂತ್ರಾಲಯದ ಶ್ರೀ ಭುವನೇಂದ್ರ ತೀರ್ಥರಿಂದ ಆಶ್ರಮ ಸ್ವೀಕರಿಸಿ, ಗೋಪಾಲದಾಸರೊಡನೆ ತುಂಗಭದ್ರಾ ತಟದ ವೇಣೀಸೋಮಪುರದಲ್ಲಿ ನೆಲಸಿ ಅನೇಕ ಪದ ಸುಳಾದಿ ರಚಿಸಿದರು. ಕುದುರೆಸವಾರಿ, ಮೃಷ್ಟಾನ್ನ ಭೋಜನ, ಸುಗಂಧದ್ರವ್ಯಗಳ ಲೇಪನ ಮುಂತಾದ ಸುಖ ಸಮೃದ್ಧಿ ಅನುಭವಿಸಿದ ಗೋಪಾಲದಾಸರ ಬದುಕಿನ ತತ್ವಸಾರವು ಅವರ ವೈರಾಗ್ಯ ಸುಳಾದಿಯಲ್ಲಡಗಿದೆ ನೂರಾರು ಜನ ಶಿಷ್ಯರೊಡನೆ ಬದರಿಯಿಂದ ರಾಮೇಶ್ವರದ ಸಕಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ- ಭಾಗವತಪ್ರವರೊಂದು ಬೀಡುಕೊಂಡಾಗ ವಿಠಲನು ಕುದುರೆ ಸವಾರ

ನಾಗಿ ಹರಿ ಒಂದು ತನ್ನ ದರ್ಶನಕ್ಕೆ ಬರುವುದಿಲ್ಲವೇ ಎಂದು ಕೇಳಿದಂತಹ ದಿವ್ಯಾನುಭವವಾಗಿ ಪಂಡರಪುರವನ್ನು ಸಂದರ್ಶಿಸುತ್ತಾರೆ.

ಕಾವ್ಯಶಾಸ್ತ್ರ ಪುರಾಣಗಳನ್ನು ಗೋಪಾಲದಾಸರು ತಮ್ಮ ಅಂತರಂಗದ ಆಳದಿಂದ ಮೂಡಿಬಂದ ಕನ್ನಡ ಕಾವ್ಯಾಲಂಕಾರ ರೂಪದಲ್ಲಿ ಕನ್ನಡಿಗರಿಗೆ ನೀಡಿ ಮಹೋಪಕಾರ ಮಾಡಿದರು. ದೇವರನಾಮ ಸುಳಾದಿಗಳ ಸಮರ್ಥ ಕಾವ್ಯರ್ಶಿಗಳಾದಂತೆಯೇ ಬ್ರಹ್ಮಾಂಡದ ಚಿತ್ರಪಟವೊಂದನ್ನು ಪ್ರಮಾಣ ಬದ್ಧವಾಗಿ ರಚಿಸಿ ಶಾಸ್ತ್ರೀಯ ಚಿತ್ರಕಲಾ ಕೋವಿದರೆಂದು ಖ್ಯಾತರಾದರು. ವಿಜಯದಾಸರ ಕಂಕಣಾಕಾರ ಸುಳಾದಿಯನ್ನು ಚಕ್ರಾಬ್ಜಮಂಡಲದಲ್ಲಿಟ್ಟು ಬೀಜಾಕ್ಷರಗಳನ್ನು ಯಥಾನ್ಯಾಸಗಳಲ್ಲಿ ಮೂಡಿಸಿ ಉಪಾಸನೆಗೆ ಅನುವು ಮಾಡಿ ಕೊಟ್ಟ ಅಪರೂಪದ ಹರಿದಾಸ ಕಲಾವಿದರು ಶ್ರೀ ಗೋಪಾಲದಾಸರು. ಗೀತೋಪನಿಷತ್ತುಗಳ ಹಾಗೂ ಸಕಲ ಪ್ರಮೇಯಗಳ ಮೂಲ ಆಕರಗಳನ್ನು ಪರಿಶೀಲಿಸಿ, ಭಗವಂತನ ವಿರಾಡ್ರೂಪವನ್ನೂ, ಲೋಕಗಳ ಸ್ಥಾನವನ್ನು ತೋರಿಸಿ. ಬ್ರಹ್ಮಾಂಡದ ಪಟವನ್ನು ಪ್ರಕಟಿಸಿ ಪರಮ ಉಪಕಾರ ಮಾಡಿದರು

ಶ್ರೀ ಮಧ್ವಾಚಾರ್ಯರ ತಂತ್ರಸಾರದಂತಹ ಮಹತ್ವದ ಶಾಸ್ತ್ರಗ್ರಂಥದಲ್ಲಿ ತಿಳಿಸಿರುವ ಮಂತ್ರಪ್ರತಿಪಾದ್ಯ ಭಗವನ್ಮೂರ್ತಿಗಳನ್ನು ಶಿಲ್ಪ ಶಾಸ್ತ್ರವಿಧಿಯ ದಂತೆಯೇ ರಚಿಸಿ ಮಂತ್ರಾಕ್ಷರಗಳನ್ನು ಯಥಾನ್ಯಾಸದಲ್ಲಿ ಗುರುತಿಸಿ ಪ್ರತಿನಿತ್ಯದ ದೇವಪೂಜಾ ಕಾಲದಲ್ಲಿ ಅದನ್ನು ಗೋಪಾಲದಾಸರು ಪೂಜಿಸುತ್ತಿದ್ದರು. ಗೋಪಾಲದಾಸರು, ಚಿತ್ತಚಾಂಚಲ್ಯವನ್ನು ಮನೋದೌರ್ಬಲ್ಯವನ್ನೂ ಪ್ರತಿಯೊಬ್ಬರೂ ನಿವಾರಿಸಿಕೊಂಡು ಭಗವಂತನಲ್ಲಿ ಶ್ರದ್ಧಾಭಕ್ತಿಗಳನ್ನಿರಿಸಿಕೊಳ್ಳ ಬೇಕೆಂದು ಕಳಕಳಿಯಿಂದ ಕರೆನೀಡಿದರು. ಅರಿಷಡ್ವರ್ಗಗಳು ಸಪ್ತವ್ಯಸನಗಳು, ಅಷ್ಟಮದಗಳು ವ್ಯಕ್ತಿಯನ್ನು ಹೇಗೆ ದಾರಿ ಕೆಡಿಸುತ್ತವೆಂಬ ತಂತ್ರವನ್ನು ಬಯಲಿಗೆಳೆದ ಗೋಪಾಲದಾಸರು ಭಗವಂತನ ಸ್ಮರಣೆಯಿಂದ ಜ್ಞಾನವಂತರ ಸಂಗದಿಂದ, ನಾನಾವಿಧ ಭಕ್ತಿಯಿಂದ ಮುಕ್ತಿ ರಾಜಮಾರ್ಗವನ್ನು ಪ್ರತಿಯೊಬ್ಬರು ಸಾಧಿಸಬಹುದು ಎಂದು ತಮ್ಮ ಕೀರ್ತನೆಗಳಲ್ಲಿ ಸಮರ್ಥವಾಗಿ ಪ್ರತಿಪಾದಿಸಿದರು

ಭಗವಂತನ ದಾಸರ ಮನೆಯ ಬಾಗಿಲ ಕಾಯುವ ಕುನ್ನಿ ನಾನು ಎಂದು ಸ್ವಾಹಂಕಾರ ಖಂಡನಾ ಮಾರ್ಗದಿಂದ ದಾಸ್ಯಭಾವದ ತುತ್ತತುದಿಗೇರುವ ಗೋಪಾಲದಾಸರು ದಾಸ ಸಾಹಿತ್ಯದ ವೈರಾಗ್ಯನಿಧಿ. ಸಿದ್ಧಾಂತ ಜ್ಞಾನ ಜನ್ಯ ಭಾವ ಪರಿಶುದ್ಧ ಭಕ್ತಿಯಿಂದ ಅನನ್ಯ ವೈರಾಗ್ಯಮೂರ್ತಿಗಳಾಗಿ ಸಾಹಿತ್ಯದಲ್ಲಿ ಭಗವತ್ ಸಾಧನೆಯನ್ನು ಮಾಡಿದವರು ಶ್ರೀ ಗೋಪಾಲದಾಸರು. ಭೋಗ ಮೂರ್ತಿಗಳಾಗಿದ್ದೂ ಅವಧೂತರಾಗಿ, ಸಾಹಿತ್ಯ ಸಾಮ್ರಾಟರಾಗಿದ್ದೂ ಸಾಧನ ಸಿದ್ಧಪುರುಷರಾಗಿ ಅನನ್ಯವಾದ ತ್ಯಾಗ ಮೂರ್ತಿಗಳಾಗಿ, ಜಗನ್ನಾಥದಾಸರಂತಹ ಶಿಷ್ಯರನ್ನೂ, ವಿಜಯದಾಸರಂತಹ ಗುರುಗಳನ್ನೂ ಪಡೆದುಕೊಂಡ ಮಹಾ ಭಾಗ್ಯನಿಧಿಗಳು ಶ್ರೀ ಗೋಪಾಲದಾಸರು

**ಜಗನ್ನಾಥದಾಸರು**

ಜಗನ್ನಾಥದಾಸರ ಹರಿಕಥಾಮೃತ ಕೇಳುವವರಿಗೆ ಕರ್ಣಾಮೃತ ದ್ವೈತ ದರ್ಶನದ ವಿದ್ಯಾಮೃತ ಕನ್ನಡಿಗರ ಕಾವ್ಯಾಮೃತ ಜಗನ್ನಾಥದಾಸರು ಉಕ್ತಿ ಹೊರಡಿಸುವ ಭಾವನೆಯನ್ನು ಅಂಕೆಯೊಳಗಿಡಬಲ್ಲ ಅಸಾಧ್ಯಶಕ್ತಿಯುಳ್ಳ ರಸಕವಿಗಳು ರಸ ಪರಮಾನಂದದಲ್ಲಿ ಉನ್ನತ ಅಭಿವ್ಯಕ್ತಿಯ ಪ್ರವಾಹದಲ್ಲಿ ತೇಲುವಾಗಲೂ ದ್ವೈತದೀಕ್ಷೆಯ ತಾತ್ವಿಕ ದಡಗಳ ನಡುವೆಯೇ ಹರಿಯುವುದನ್ನು ಮರೆಯದ ಮಹಾಪ್ರಜ್ಞಾಪೂರ್ಣಕಾವ್ಯ ಅವರದು ಪುರಂದರ ದಾಸರು ಹರಿದಾಸ ಕೀರ್ತನ ಪದ್ಧತಿಯ ಮೂಲಗುರುಗಳಾದರೆ ಜಗನ್ನಾಥದಾಸರು ದಾಸ ಗುರುಕುಲದ ದಾಂಗುಡಿಗರು ಅವರ ಕೀರ್ತಿ ಚಿರಸ್ಥಾಯಿ ಕನ್ನಡ ಭಾಷೆ ಜೀವಂತವಿರುವವರೆಗೂ, ದ್ವೈತ ದಿಗ್ವಿಜಯದ ಕಹಳೆ ಮೊಳಗುವಂತೆ, ಸ್ವಯಂ ಸ್ಫುರಿತವಾಗಿ ರಸಪ್ರವಾಹಿನಿಯಾಗಿ ಹರಿದುಬಂದ ಕಾವ್ಯಗಂಗ ಎಲ್ಲ ಅರ್ಥಗಳಿಂದಲೂ ಭಕ್ತಿಭಾಗೀರಥಿ

ಪ್ರಜ್ಞಾನವನವೋನ್ಮೇಷ ಶಾಲಿನೀ ಪ್ರತಿಭಾ ಎಂದು ಲಾಕ್ಷಣಿಕರು ಹೇಳುವಂತೆ ಪಾಂಡಿತ್ಯ ಪ್ರತಿಭೆಗಳ ಪವಿತ್ರ ಸದನ್ನಂದನ ಹಾಗೂ ಪ್ರಖರ ತೇಜಸ್ಸು ಶ್ರೀ ಜಗನ್ನಾಥದಾಸರು ಸಾಮಾನ್ಯರ ಬುದ್ಧಿಗ ಅಗೋಚರವಾದ, ಗೂಢ ರೀತಿಯ ಅವರ ಅತ್ಯಂತ ವ್ಯಾಪಕ ಸಿದ್ಧಾಂತವನ್ನು ಸರ್ವಜನಾದರಣೀಯ

ವಾಗುವಂತೆ, ಪಾಮರರ ಹೃದಯದಾಳಕ್ಕಿಳಿಯುವಂತೆ. ವಿದ್ವಜ್ಜನರು ಕನ್ನಡದ ಈ ಕಾವ್ಯಕ್ಕೆ, ಸಂಸ್ಕೃತದಲ್ಲಿ ವ್ಯಾಖ್ಯಾನ ಬರೆಯಬೇಕೆಂದು ಹಂಬಲಿಸುವಂತೆ ಮಾಡಿದ ವಿದ್ವದ್ವರೇಣ್ಯರು ಶ್ರೀ ಜಗನ್ನಾಥದಾಸರು

ಶ್ರೀ ಆನಂದತೀರ್ಥ ಭಗವತ್ಪಾದರ ಸಿದ್ಧಾಂತ ತತ್ವಜ್ಞಾನದ ಬೀಜದಿಂದ ಅಂಕುರಿಸಿದ ಈ ಕವಿತಾಕಲ್ಪತರು ದಾಸಕೂಟದ ಬಹುತೇರು. ಇವರಲ್ಲಿ ಅಂಕುರಿಸಿದು ಹಮ್ಮಿಕೊಂಡ ದಾಸಕೂಟದ ಬದುಕು ಇಂದಿಗೂ ಮೂಲವೃಕ್ಷದ ಚೈತನ್ಯದಿಂದ ಚಾಲನಶಕ್ತಿಯಿಂದ ಸಮೃದ್ಧವಾಗಿ ಪ್ರಸರಿಸುತ್ತಿದೆ. ಈ ಕವಿಯ ಯುಗಯುಗಗಳ ಹಾಡಿಗೆ ಸರ್ವಜ್ಞ ಸಿದ್ಧಾಂತವೊಂದೇ ಪಲ್ಲವಿ ಅಖಂಡ ಕಾವ್ಯದಲ್ಲಿ ಅಪೂರ್ವ ತತ್ವಜ್ಞಾನದ ನಿಧಿಯನ್ನೇ ಹುದುಗಿಸಿರುವ ಅಗಾಧ ಶಕ್ತಿಯು ಈ ಕವಿಗೆ ಅಂತರಂಗ ಬಹಿರಂಗ ವ್ಯಾಪಾರ ವ್ಯವಹಾರಗಳ ಬಗ್ಗೆ ಅನನ್ಯ ಪ್ರಜ್ಞೆಯಿದೆ ತಾವು ವಿಶ್ವಕ್ಕೆ ನೀಡುತ್ತಿರುವ ಭಕ್ತಿ ಕಾವ್ಯದ ಬಗ್ಗೆ ಅಪಾರ ದೀಕ್ಷೆ ಇದೆ ಆ ದೀಕ್ಷೆಯಲ್ಲಿ ಅಪರಿಮಿತವಾದ ಅಧ್ಯಯನ ಮೂಡಿಸುವಂಥಾ ಸಾಧನೆಯಿದೆ ಆ ಸಾಧನೆಯು ಒಂದೆ ಶ್ರದ್ಧೆ. ಸಿದ್ಧಿಗಳು ಧವಳಗಿರಿ, ಗೌರೀಶಂಕರಗಳಾಗಿವೆ. ಜಗನ್ನಾಥದಾಸರ ದಾಸತ್ವದ ಇತಿ ಮಿತಿ ಈ ಸಾಧನೆಗೆ, ಈ ಸಿದ್ಧಾಂತಕ್ಕೆ ಈ ಸಾಕ್ಷಾತ್ಕಾರಕ್ಕೆ ಸರ್ವಸಮರ್ಪಣವಾಗಿದೆ ಭಗವಂತನಲ್ಲಿ ತಾವು ದಾಸಾನುದಾಸರೆಂಬ ತನ್ಮಯತೆಯ ದೀನರನ್ನು ಕೈ ಹಿಡಿದು ಉದ್ಧರಿಸಬೇಕೆಂಬ ಕಳಕಳಿಯು ತುಂಬಿದೆ ಪಾಂಡಿತ್ಯದ ಬಲದಿಂದ ವಿಶ್ವವನ್ನೇ ತನ್ನ ಪದತಲದಡಿಗ ಮುಗಿಬೀಳಿಸಿಕೊಳ್ಳುವ ಅಹಂಕಾರ ಸಂಪೂರ್ಣ ಕ್ಷಯವಾಗಿದೆ ಶ್ರೀಹರಿಯ ದಿವ್ಯ ಪದತಲದಡಿಗ, ಎಲ್ಲವನ್ನು ಅರ್ಪಿಸಿಗೂ ಸ್ಥಿರ- ನೆಮ್ಮದಿಯ ನಡುಮನೆಯಲ್ಲಿ. ಶ್ರೀಕಾಂತನ ಸ್ಮರಣೆಧ್ಯಾನಗಳಲ್ಲಿ ಉಳಿದ ಬದುಕನ್ನು ಕಳೆಯಬೇಕೆನ್ನುವ ಕಳಕಳಿಯು ಪ್ರತಿಧ್ವನಿ ಅಲ್ಲಿ ಕೇಳಿಸುತ್ತಿದೆ ಭಗವಂತ ಮುಲಗಿ ಹಾಡಿದರೆ ಕುಳಿತು ಕೇಳುವ ಕುಳಿತರೆ ನಿಂತು ನಿಂತರೆ ನಲಿವ, ನಲಿದರೆ ಒಲಿವ ನಿಮಗಂಬ ಅಪಾರ ವಾತ್ಸಲ್ಯಮಯಿ ಅನನ್ಯಭಕ್ತಿಯ ಭಕ್ತಾಪರಾಧ ಸಹಿಷ್ಣು

ಭಗವಂತನ ದಿವ್ಯಸಾನ್ನಿಧ್ಯವನ್ನು ಕಾವ್ಯತತ್ವಕ್ಕಿಳಿಸಿದ ಮಹಾಮಹಿಮರು ಜಗನ್ನಾಥದಾಸರು, ಹರಿಕಥಾಮೃತಸಾರದ ಭಂಗರನ್ನು ತಮ್ಮ ಕಾವ್ಯಕ್ಕೆ

ಜಗನ್ನಾಥದಾಸರಿಗೆ ವಿಜಯರಾಯರ ಕರುಣೆ, ಗೋಪಾಲದಾಸರ ಗುರುತ್ವಗಳು ಎರಡು ಕಣ್ಣುಗಳು "ವಾದಿವಾರಣ ಪಂಚವದನ - ಸತ್ಯಬೋಧ ಸದ್ಗುರು ಜಿತಮದನ" ಎಂದು ಸತ್ಯಬೋಧರನ್ನು ಸ್ತುತಿಸುವ ಜಗನ್ನಾಥದಾಸರು ಸತ್ಯಬೋಧರ ಅತ್ಯಂತ ಆಪ್ತರಲ್ಲಿ ಒಬ್ಬರಾಗಿದ್ದರು. ವಿಷಯಲೋಲುಪ ಕರ್ಜಗಿ ದಾಸಪ್ಪನ ಸ್ವರೂಪೋದ್ಧಾರಮಾಡಿ, ದಾಸ ಸನ್ಮಾರ್ಗಕ್ಕೆ ತಂದು ಶ್ರೀದವಿಠಲರನ್ನಾಗಿ ಹರಿಕಥಾಮೃತಸಾರಕ್ಕೆ ಫಲಶ್ರುತಿ ಬರೆಸಿದರು ಪ್ರಾಣೇಶದಾಸರಂತಹ ದಾಸಸಾಹಿತ್ಯ ಪರಂಪರೆಯ ಪ್ರದೀಪಕರನ್ನು ಪ್ರಕಾಶ ಮಾಡಿದ ಇವರು ದೇವತಾಚಾರ್ಯ ಸಂಪೂರ್ಣ ಒಡಮೂಡಿದ ಸದ್ವೈಷ್ಣವ ನಿಧಿಗಳು ಸಾಹಿತ್ಯದಲ್ಲಿ ಪುರುಷಸರಸ್ವತಿಯೆನಿಸಿದ ದಾಸರು ಸಂಗೀತದಲ್ಲಿ ಗಂಧರ್ವರು ತಮ್ಮ ಗೀತರಚನೆಗಳಿಗೆ ಮಾತ್ರಾಗಣ ಅಂಗಗಳೆರಡನ್ನೂ ಒಳಸಿಕೊಂಡು ಸಾಹಿತ್ಯಸಂಗೀತಶಾಸ್ತ್ರಗಳ ಪ್ರೌಢ ಅಭಿವ್ಯಕ್ತಿಯೊಡನೆ ಶತಮಾನಗಳ ವಾಗ್ಗೇಯಕಾರರೆನಿಸಿಕೊಂಡರು ಪಾಪ ಮಾಡಿದ ಅನಂತರ ಪಶ್ಚಾತ್ತಾಪದಿಂದ ದಗ್ಧರಾದ ಪ್ರತಿಯೊಬ್ಬರಿಗೂ ದಾಸರು, ಭಗವಂತನು ಪತಿತಪಾವನನೆಂಬುದನ್ನು ಉದ್ಘೋಷಿಸಿ "ಸಿರಿರಮಣ ತವಚರಣ ದೊರಕುವುದು ಹೀಗಿನ್ನು ಪರಮ ಪಾಪಿಷ್ಠ ನಾನು' ಎಂದು ಹೇಳಿ ಕಡೆಗೆ "ಪತಿತಪಾವನನೆಂಬ ಬಿರುದು ಎನಿಸಿಯು ನೀರ ಸಾರುತ್ತಿವೆ ಆದ್ದರಿಂದ ಪಾತಕಿಗಳನ್ನೂ, ಪಾಮರರನ್ನೂ, ಭಕ್ತಾಪರಾಧ ಸಹಿಷ್ಣುವಾದ ಭಗವಂತನೇ ಕಾಪಾಡಬೇಕು ಎಂದು ಅವರೆಲ್ಲರ ಪರವಾಗಿ ಮೊರೆಯಿಟ್ಟರು ಸದಾ ಭಗವಧ್ಯಾನಪರನಾಗಿರೆಂದು ಹೇಳುವ ದಾಸರು ಸಿದ್ಧಭಕ್ತನ ಸಲ್ಲಕ್ಷಣಗಳನ್ನೆಲ್ಲಾ ಹೇಳಿ "ಸಿರಿನಿಲಯನ ಗುಣಗಳ ತಿಳಿದು ಭಜಿಸುವುದೆ ಫಲವಿದು ಬಾಳ್ದುದಕೆ" ಎಂದಿದ್ದಾರೆ "ಅರಿತವರಿಗತಿ ಸುಲಭ ಶ್ರೀ ಹರಿಯ ಪೂಜೆ, ಅರಿಯದವ ನಿರ್ಭಾಗ್ಯ ಪರಲೋಕಮೋಕ್ಷಗ" ಎಂದು ಒಳಗುಟ್ಟು ತೆರೆಸುತ್ತಾರೆ

ಭಗವಂತನ ಮೂವತ್ತೆರಡು ಲಕ್ಷಣಗಳನ್ನೊಳಗೊಂಡ ಶ್ರೀ ಹರಿಕಥಾಮೃತಸಾರದ ಮೂವತ್ತೆರಡು ಸಂಧಿಗಳೂ ತತ್ವಪ್ರಮೇಯಗಳ ಶಾಸ್ತ್ರೀಯ ವ್ಯಾಖ್ಯಾನಗಳೆಲ್ಲವನ್ನೂ, ಸುಲಭವಾಗಿ ವಿವರಿಸುತ್ತಾ ಭಗವದ್ಭಕ್ತಿಯ ಪವಿತ್ರ ಸೇತುವೆಯನ್ನು ಕಟ್ಟಿ ಮುಕ್ತಿಪಥದತ್ತ ಕರೆದೊಯ್ಯುತ್ತವೆ

ಚಿಕ್ಕವಯಸ್ಸಿನಲ್ಲಿಯೇ ಪ್ರತಿಭೆ ಸ್ಫುರಿಸುತ್ತಿದ್ದ ಶ್ರೀನಿವಾಸಾಚಾರ್ಯ

ರಿಗೂ ಹಿಂದೆ ಪಾಂಡಿತ್ಯದ ಹಮ್ಮುಬಿಮ್ಮುಗಳಿದ್ದುವು. ವಿಜಯದಾಸರಂತಹ ಅಪರೋಕ್ಷ ಜ್ಞಾನಿಗಳ, ಗೋಪಾಲದಾಸರಂತಹ ಗಣಪತಿಸ್ವರೂಪರ ಅಪಾರ ಕರುಣೆ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ, ಅಹಂಕಾರ ಸಂಪೂರ್ಣ ನಶಿಸಿ, ಬದಲಿಗೆ, ಗೋಪಾಲದಾಸರಿಂದ ಅಪಮೃತ್ಯು ನಿವಾರಣೆಯಾಗಿ, ನಲವತ್ತು ವರ್ಷಗಳ ಆಯುಸ್ಸು ಆಚಾರ್ಯರಿಗೆ ದೊರೆಯಿತು. ಪುನರ್ಜನ್ಮ ಪಡೆದ ಶ್ರೀನಿವಾಸಾಚಾರ್ಯರು ಪಂಢರಾಪುರದ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡುವಾಗ ತಟಿತ್ಕೋಟಿ ನಿಭಕಾಯನ ದರುಶನವಾದಂತಾಗಿ "ಜಗನ್ನಾಥ ವಿಠಲ" ಎಂಬ ಅಂಕಿತ ಶಿಲಾಫಲಕವೊಂದು ಲಭಿಸಿತು. ಅಂದಿನಿಂದ ರಂಗನನ್ನು ಕೊಂಡಾಡುವ ಮಂಗಳಾತ್ಮರ ಸಂಗಸುಖ ಭಾಗ್ಯಕ್ಕಾಗಿ ಹಾತೊರೆದು, ಹರಿ ನಾಮ ಸ್ಮರಣೆಯ ಅನಂತ ಸಾಧ್ಯತೆಗಳನ್ನು ತಮ್ಮದನ್ನಾಗಿ ಮಾಡಿಕೊಂಡು "ಹರಿಕಥಾಮೃತಸಾರ"ವನ್ನು ರಚಿಸಿದರು.

ಪಾಂಡಿತ್ಯದ ಪ್ರಖರತೆಯನ್ನು. ಪ್ರತಿಭೆಯ ಪ್ರಭಾವಳಿಯಲ್ಲಿ ಪಲ್ಲವಿಸಿ, ತಮ್ಮ ಪ್ರಾಸಾದಿಕ ವಾಣಿಯಿಂದ ದಾಸಸಾಹಿತ್ಯವನ್ನು ಸಾಹಿತ್ಯ ಸಂಸ್ಕೃತಿಗಳ ಉತ್ತುಂಗಶೃಂಗದ ತರಂಗಿಣಿಯನ್ನಾಗಿಸಿ. ಭಕ್ತಿಪರಂಪರೆಯ ಭವ್ಯಕಾವ್ಯಗಳ ರಸಭಿತ್ತಿಯನ್ನಾಗಿಸಿ, ಕಾವ್ಯಸಿದ್ಧಿಯ ಸಮೃದ್ಧ ಸಾಧನೆಯನ್ನು ಸಿದ್ಧಾಂತದ ಸತ್ವದಲ್ಲಿ ಸ್ಥಾಪಿಸಿ. ಸೌಭಾಗ್ಯದಾಯಕವಾದ ಹರಿಕಥೆಯ ಅಮೃತವನ್ನು ಶಾಶ್ವತ ಸಜ್ಜನರಿಗೆ ದೊರಕುವಂತೆ ಅನುಗ್ರಹಿಸಿದ ಭಗವದಪರೋಕ್ಷಜ್ಞಾನಿಗಳು ಶ್ರೀ ಜಗನ್ನಾಥದಾಸರು.

# ಇನ್ನಿತರ ಕೆಲವು ಪ್ರಮುಖ ಹರಿದಾಸರು

## 1. ಶ್ರೀ ವ್ಯಾಸ ವಿಠಲದಾಸರು

ಕಲ್ಲೂರು ಸುಬ್ಬಣ್ಣಾಚಾರ್ಯರೆಂದು ಖ್ಯಾತರಾಗಿದ್ದ ಇವರು ವಿಜಯ ದಾಸರಿಂದ ಹರಿದಾಸ ದೀಕ್ಷೆ ಸ್ವೀಕರಿಸಿ "ವ್ಯಾಸವಿಠಲ" ಅಂಕಿತ ಪಡೆದು ಅನೇಕ ಕೃತಿಗಳನ್ನು ರಚಿಸಿದರು. ಉದ್ದಾಮ ಸಂಸ್ಕೃತ ಪಂಡಿತರೆನಿಸಿದ ಇವರು ನೂರಾರು ಬಾರಿ "ಶ್ರೀಮನ್ನ್ಯಾಯಸುಧಾ" ಗ್ರಂಥದ ಮಂಗಳ ಮಾಡಿದವರು. ಇವರು ರಚಿಸಿರುವ ವಿಜಯ ಕವಚ ಹರಿದಾಸ ಸಾಹಿತ್ಯದ ವಜ್ರಕವಚ.

## 2. ಶ್ರೀ ವರದ ಗೋಪಾಲ ವಿಠಲದಾಸರು

ವಿಶಿಷ್ಟ ಸಾಮರ್ಥ್ಯದ ಇವರು ಶ್ರೇಷ್ಠ ಹರಿದಾಸರೆನಿಸಿದ ಶ್ರೀ ಗೋಪಾಲದಾಸರ ಸೋದರರು. ಅವರಿಂದಲೇ 'ಶ್ರೀ ವರದಗೋಪಾಲ ವಿಠ್ಠಲ' ಅಂಕಿತವನ್ನು ಪಡೆದು ಅನೇಕ ಪದ ಪದ್ಯ ಸುಳಾದಿಗಳನ್ನು ರಚಿಸಿದ್ದಾರೆ.

## 3 ಶ್ರೀ ಗುರು ಗೋಪಾಲದಾಸರು

ಶ್ರೀ ವ್ಯಾಸ ತತ್ವಜ್ಞರಲ್ಲಿ ಶಾಸ್ತ್ರಾಧ್ಯಯನ ಮಾಡಿ ಅಪರ ಹಿತ್ತರೆನಿಸಿದ ದಾಸಪ್ಪ ಶ್ರೀ ಗೋಪಾಲದಾಸರ ತಮ್ಮಂದಿರು, ಇವರೂ ಸಹ ಶ್ರೀ ಗೋಪಾಲ ದಾಸರಿಂದಲೇ ಹರಿದಾಸ ದೀಕ್ಷೆ ಸ್ವೀಕರಿಸಿ—'ಶ್ರೀ ಗುರು ಗೋಪಾಲವಿಠ್ಠಲ ಎನ್ನುವ ಅಂಕಿತವನ್ನು ಪಡೆದು ಅನೇಕ ಕೃತಿಗಳನ್ನು ರಚಿಸಿದರು.

## 4. ಶ್ರೀ ತಂದೆ ಗೋಪಾಲವಿಠ್ಠಲದಾಸರು

ಇವರೂ ಶ್ರೀ ಗೋಪಾಲದಾಸರ ಕೊನೆಯ ತಮ್ಮಂದಿರು ಅಣ್ಣ ನಿಂದಲೇ "ತಂದೆ ಗೋಪಾಲ ವಿಠ್ಠಲ ಅಂಕಿತ ಪಡೆದು ಹರಿದಾಸರೆನಿಸಿ ಅನೇಕ ಕೃತಿಗಳನ್ನು ರಚಿಸಿದರು. ಇವರ ಹೆಸರು ರಂಗಪ್ಪ.

## 5. ಶ್ರೀ ಪ್ರಾಣೇಶ ವಿಠ್ಠಲದಾಸರು

ಶ್ರೀ ಜಗನ್ನಾಥದಾಸರ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿ, ಅವರಿಂದ "ಪ್ರಾಣೇಶ ವಿಠ್ಠಲ" ಅಂಕಿತ ಪಡೆದು ಅನೇಕ ಕೃತಿಗಳನ್ನು ರಚಿಸಿರುವ ಶ್ರೀ ಪ್ರಾಣೇಶ ವಿಠ್ಠಲ ದಾಸರ ಮೊದಲ ಹೆಸರು ಯೋಗೀಂದ್ರಪ್ಪ ಎಂದು. ಇವರ ಕೃತಿಗಳು ನವರಸ ಭರಿತವಾದವುಗಳು ಪಾರ್ಸಿ ಭಾಷೆಯ ಅಧ್ಯಯನದಲ್ಲಿ ತೊಡಗಿದ್ದ ಇವರು ಶ್ರೀ ಜಗನ್ನಾಥದಾಸರ ಉಪದೇಶದಿಂದ ಪ್ರಭಾವಿತರಾಗಿ ಲೌಕಿಕ ಅಭಿಲಾಷೆಗಳನ್ನು ತೊರೆದು ಕನ್ನಡ ಭಾಷೆಯಲ್ಲಿ ಅನೇಕ ಪದ ಪದ್ಯ ಸುಳಾದಿಗಳನ್ನು ಬಹು ರಮ್ಯವಾಗಿ ರಚಿಸಿದ್ದಾರೆ. ಹರಿದಾಸ ಸಾಹಿತ್ಯ ಭಂಡಾರ ದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಆಕ್ರಮಿಸಿರುವ ಇವರ ಸಾಹಿತ್ಯ ಕೃತಿಗಳು, ಉನ್ನತ ಗುಣಮಟ್ಟದಿಂದ ಕೂಡಿದ್ದು ಅವರ ಪ್ರತಿಭೆಯನ್ನು ಪ್ರತಿಬಿಂಬಿಸುತ್ತ ಹರಿದಾಸ ಸಾಹಿತ್ಯ ಭಂಡಾರವನ್ನು ಸಮೃದ್ಧಿಗೊಳಿಸಿದೆ

## 6 ಶ್ರೀದ ವಿಠ್ಠಲದಾಸರು

ಶ್ರೀ ಜಗನ್ನಾಥದಾಸರ ಅತ್ಯದ್ಭುತ ಪ್ರಭಾವ ವಲಯ ಪರಧಿಯಲ್ಲಿ ಸಿಲುಕಿ "ಶ್ರೀದ ವಿಠ್ಠಲ" ಅಂಕಿತವನ್ನು ಪಡೆದು ಹರಿದಾಸ ಶ್ರೇಷ್ಠರಲ್ಲೊಬ್ಬ ರೆನಿಸಿದವರು ಕರ್ಜಗಿಯ ಪ್ರಕಾಂಡ ಪಂಡಿತರೆನಿಸಿದ ದಾಸಪ್ಪನವರು, ತಮ್ಮ ಬಾಹ್ಯಾಡಂಬರಗಳನ್ನೆಲ್ಲ ತೊರೆದು ಅತ್ಯಂತ ಸರಳರಾಗಿ, ಸರಳ ಸುಂದರ ಶೈಲಿಯಲ್ಲಿ ಅನೇಕ ಕೃತಿಗಳನ್ನು ರಚಿಸಿದರು

## 7 ಶ್ರೀ ವರಹ ತಿಮ್ಮಪ್ಪದಾಸರು

ಉಡುಪಿಯ ಸಮೀಪದ ಗ್ರಾಮವೊಂದರಲ್ಲಿ ಜನಿಸಿ, ಶ್ರೀ ಕೃಷ್ಣಾಪುರ ಮಠದ ಶ್ರೀ ವಿಬುಧೇಂದ್ರ ತೀರ್ಥರ ಶಿಷ್ಯರೆನಿಸಿ, "ವರಹ ತಿಮ್ಮಪ್ಪ" ಅಂಕಿತ ದಿಂದ ಕೃತಿಗಳನ್ನು ರಚಿಸಿರುವ ಹರಿದಾಸರ ನಿಜ ನಾಮಧೇಯ ಕೃಷ್ಣರಾಯ ಎಂದು

## 8. ಶ್ರೀ ಕೇಶವ ವಿಠ್ಠಲದಾಸರು

ಗದ್ವಾಲ್‌ನ ಸುಬ್ಬಣ್ಣದಾಸರೆಂಬುವರೇ ಗೋಪಾಲದಾಸರ ಶಿಷ್ಯ

ಪ್ರಮುಖರಲ್ಲೊಬ್ಬರಾದ ಕೇಶವ ವಿಠ್ಠಲಾಂಕಿತರು ಪ್ರಾಸಬದ್ಧ ಪ್ರಬುದ್ಧ ಶೈಲಿಯ ಪದಗಳ ರಚನೆಯಲ್ಲಿ ಪ್ರಸಿದ್ಧರು.

### 9 ಶ್ರೀ ಅಭಿನವ ಜನಾರ್ಧನ ವಿಠ್ಠಲದಾಸರು

ಗುರು ಸಾರ್ವಭೌಮ ಶ್ರೀ ರಾಘವೇಂದ್ರ ಸ್ವಾಮಿಗಳ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿ ಇಂದು ಭಕ್ತ ಜನರ ನಾಲಿಗೆಯ ಮೇಲೆ ನಲಿಯುತ್ತಿರುವ ಅನೇಕ ಗುರುರಾಜರ ಸ್ತುತಿಪರ ಕೃತಿಗಳ ಕರ್ತೃವೆನಿಸಿ, ಅಭಿನವ ಜನಾರ್ಧನ ವಿಠ್ಠಲದಾಸರೆಂದು ಖ್ಯಾತರಾದವರು. ಶ್ರೀ ಜಗನ್ನಾಥದಾಸರ ಶಿಷ್ಯರಲ್ಲೊಬ್ಬರಾದ ಸೋಮಪುರದ ಪ್ರೇಮದಾಸರು.

### 10 ಶ್ರೀ ಗುರುಪ್ರಾಣೇಶ ವಿಠ್ಠಲದಾಸರು

ಇವರು ಖ್ಯಾತ ಹರಿದಾಸರಾದ ಶ್ರೀ ಪ್ರಾಣೇಶದಾಸರ ಮಕ್ಕಳು. ಶ್ರೀ ಜಗನ್ನಾಥದಾಸರಲ್ಲಿ ಶಿಷ್ಯತ್ವವನ್ನು ವಹಿಸಿ ವ್ಯಾಸ-ದಾಸ ಸಾಹಿತ್ಯಗಳ ಸಾರವನ್ನೂ ತಂದೆಯಿಂದ "ಗುರುಪ್ರಾಣೇಶವಿಠ್ಠಲ' ಎಂಬ ಅಂಕಿತವನ್ನೂ ಪಡೆದು ಅತ್ಯಂತ ಸರಳ ಸುಂದರ ಕೃತಿಗಳನ್ನು ರಚಿಸಿದರು

### 11 ಶ್ರೀ ಮನೋಹರ ವಿಠ್ಠಲದಾಸರು

ಶ್ರೀ ಮನೋಹರ ವಿಠ್ಠಲದಾಸರೆಂದು ಖ್ಯಾತರಾದ ಬುದ್ದಿನ್ನಿ ನಾರಪ್ಪನವರು ಶ್ರೀ ಜಗನ್ನಾಥದಾಸರನ್ನು ಗುರುಗಳನ್ನಾಗಿ ಪಡೆದವರು ಕಾವ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಕುಶಲತೆಯನ್ನು ಮೆರೆದಿರುವ ಇವರ ಕೃತಿಗಳು ಅತ್ಯಂತ ಮನೋಜ್ಞವಾಗಿ ಸುಂದರವಾಗಿ ಮೂಡಿ ಬಂದಿರುವುದೇ ಅಲ್ಲದ ಕವಿಯ ಅಗಾಧ ಕಲ್ಪನಾ ಶಕ್ತಿಯನ್ನು, ಅವರದೇ ಆದ ವಿಶಿಷ್ಟ ಶೈಲಿಯನ್ನೂ ಎತ್ತಿ ತೋರುತ್ತವೆ ಇವರು ರಚಿಸಿರುವ "ಅನಂತ ಕಥಾ" ಕಾವ್ಯ ಕೃತಿಯನ್ನೂ ಇಂದೂ, ಅನೇಕ ಮನೆಗಳಲ್ಲಿ ಹಾಡುತ್ತಿರುವುದನ್ನು ನಾವು ಕಾಣಬಹುದು.

### 12 ಶ್ರೀ ಸುರಪುರದ ಆನಂದದಾಸರು

ಸಂಗೀತ ವಿದ್ಯೆಯಲ್ಲಿ ಅಸಮಾನ್ಯ ಪಂಡಿತರೆನಿಸಿ ರಾಜಾಶ್ರಯವಿದ್ದಿದ್ದೂ,

ಶ್ರೀಶದಾಸರಿಂದ ಉಪದೇಶ ಪಡೆದು. ಲೌಕಿಕ ಭೋಗಗಳ ಆಸೆಯನ್ನು ತೊರೆದು, ಅವರಿಂದ "ಶ್ರೀ ಕಮಲೇಶ ವಿಠಲ" ಎಂಬ ಅಂಕಿತವನ್ನು ಪಡೆದು ಹರಿದಾಸರಾಗಿ ಮೆರೆದವರು ಶ್ರೀ ನರಸಪುರದ ಆನಂದದಾಸರು ಇವರು ರಚಿಸಿರುವ ಕೃತಿಗಳು ತಮ್ಮ ಸಾಹಿತ್ಯಕ ಹಾಗೂ ತಾತ್ವಿಕ ಮೌಲ್ಯದಿಂದ, ಎಲ್ಲರಿಗೂ ಚಿರಪರಿಚಿತವಾಗಿದೆ

## 13 ತಂದೆ ಶ್ರೀಪತಿ ವಿಠಲದಾಸರು

ಗದ್ವಾಲದ ವೆಂಕಟದಾಸರು ಶ್ರೀಪತಿ ದಾಸರಿಂದ "ತಂದೆ ಶ್ರೀಪತಿ ವಿಠಲ" ಎನ್ನುವ ಅಂಕಿತ ಪಡೆದು ಹರಿದಾಸರಾಗಿ ಅನೇಕ ಕೃತಿಗಳನ್ನು ರಚಿಸಿದರು

## 14. ಶ್ರೀ ದೀಪದ ಅಣ್ಣೈದಾಸರು

'ಪ್ರಸಿದ್ಧಿ ವಿಠಲ' ಅಂಕಿತದಲ್ಲಿ ಅನೇಕ ಕೃತಿಗಳನ್ನು ರಚಿಸಿ ಪ್ರಖ್ಯಾತರಾಗಿರುವ ಧಾರವಾಡದ ದೀಪದ ಅಣ್ಣೈದಾಸರು, ತಿರುಪತಿಯ ಶ್ರೀನಿವಾಸನ ವಿಶೇಷ ಅನುಗ್ರಹಕ್ಕೆ ಪಾತ್ರರಾದವರು ಚಂದನದ ವೆಂಕಟೇಶ ದೇವರು, ಸ್ವಾಮಿ ಪುಷ್ಕರಣಿಯಲ್ಲಿ ಇವರಿಗೆ ದೊರೆತಿದ್ದು ಅದು ಇಂದಿಗೂ ಅವರ ವಂಶೀಕರ ವಶದಲ್ಲಿದ್ದು ಅಪಾರ ಮಹಿಮೆಯನ್ನು ಮೆರೆಯುತ್ತಿದೆ.

## 15 ಶ್ರೀ ಶ್ರೀಶ ಪ್ರಾಣೇಶ ವಿಠಲ ದಾಸರು

ಶ್ರೀ ಪ್ರಾಣೇಶ ವಿಠ್ಠಲದಾಸರ ಮೊಮ್ಮಕ್ಕಳು, ಶ್ರೀ ಜಗನ್ನಾಥದಾಸರ ಅನುಗ್ರಹದಿಂದ ಜನಿಸಿದವರೂ ಆದ ರಾಮದಾಸರು, ತಮ್ಮ ತಾತನಿಂದಲೇ ದಾಸದೀಕ್ಷೆಯನ್ನು 'ಶ್ರೀಶ ಪ್ರಾಣೇಶ ವಿಠಲ" ಎನ್ನುವ ಅಂಕಿತವನ್ನೂ ಪಡೆದು ಅನೇಕ ಕೃತಿಗಳನ್ನು ರಚಿಸಿ ಖ್ಯಾತರಾಗಿದ್ದಾರೆ.

## 16 ಹರಿ ಕೇಶವದಾಸರು

'ಹರಿ ವೆಂಕಟ' ಅಂಕಿತ ಶ್ರೀನಿವಾಸನ ಕಲ್ಯಾಣ ಕೃತಿ ಚಿರಪರಿಚಿತ ಇವರ ಕಲ್ಪನೆ ಶ್ರೀ ಹರಿ ಕೇಶವದಾಸರು, ಹರಿ ವೆಂಕಟದಾಸರ ವಿಶೇಷ ಆಪ್ತ

ಗ್ರಹಕ್ಕೆ ಪಾತ್ರರಾಗಿ (ಏರಿ ವೆಂಕಟದಾಸರು, ಗುರುಗಳೆಂದೂ ಸೋದರರೆಂದೂ ಪ್ರತೀತಿ ) ತಿರುಪತಿಯ ಶ್ರೀನಿವಾಸ ದರ್ಶನಕ್ಕೆ ಹೋದಾಗ, ಹೆಬ್ಬಾಗಿಲಿನಿಂದ ಸ್ವಾಮಿಯ ಸಾನಿಧ್ಯದವರೆವಿಗೂ ಬರುವಾಗ ಈ ಕೃತಿಯನ್ನು ರಚಿಸಿದರೆಂದು ತಿಳಿದು ಬಂದಿದೆ ಅತ್ಯಂತ ಜನಪ್ರಿಯವಾಗಿರುವ ಈ ಕೃತಿ ಅನಂತಾದ್ರೀಶ ಮುದ್ರಿಕೆಯ "ವೆಂಕಟೇಶ ಪಾರಿಜಾತ" ದಂತಲ್ಲದೇ, ಸಂಸ್ಕೃತ ಶ್ಲೋಕಗಳು ಹಾಗೂ ಕನ್ನಡ ಪದ ಪದ್ಯಗಳಿಂದ ಕೂಡಿ ವಿಶಿಷ್ಟವಾಗಿದೆ ಇವರ ಸ್ಥಳ ಕೋಲಾರ ಜಿಲ್ಲೆಯ ಚಿಂತಾಮಣಿ

## 17 ಶ್ರೀ ರಮಾಪತಿ ವಿಠಲದಾಸರು

ಶ್ರೀದ ವಿಠಲದಾಸರ ಸೋದರಿಯ ಮಕ್ಕಳೆನಿಸಿದ ಶ್ರೀ ನರೇಗಲ್ಲ ರಾಮದಾಸರು ಕರ್ಜಗಿ ತೀರ್ಥವಾದ ವಿಠಲದಾಸರಿಂದ ಅಂಕಿತವನ್ನು ಪಡೆದು ಬಹಳಷ್ಟು ಕೃತಿಗಳನ್ನು "ರಮಾಪತಿ ವಿಠ್ಠಲ" ಅಂಕಿತದಲ್ಲಿ ರಚಿಸಿದ್ದಾರೆ. ಸರಳ ಸುಂದರ ಶೈಲಿಗೆ ಈ ಕೃತಿಗಳು ಖ್ಯಾತವಾಗಿವೆ

## 18. ಮೊದಲಕಲ್ಲು ಶೇಷದಾಸರು

ಶ್ರೀ ವಿಜಯದಾಸರ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿ, ತಮ್ಮ ತಪಸ್ಸಿನ ಪ್ರಭಾವದಿಂದ ಶ್ರೀ ಹರಿ ವಾಯುಗಳ ಅನುಗ್ರಹವನ್ನು ಪಡೆದುಕೊಂಡು ಲೌಕಿಕವನ್ನೇ ತ್ಯಜಿಸಿ, ಸ್ವಪ್ನದಲ್ಲಿ ಶ್ರೀ ವಿಜಯದಾಸರಿಂದ, "ಶ್ರೀ ಗುರು ವಿಜಯ ವಿಠ್ಠಲ" ಎನ್ನುವ ಅಂಕಿತವನ್ನು ಪಡೆದು ಅಪಾರ ಮಹಿಮೆಗಳನ್ನು ತೋರುತ್ತಾ ಶ್ರೇಷ್ಠ ಹರಿದಾಸರೆನಿಸಿದವರು ಮೊದಲಕಲ್ಲು ಶೇಷದಾಸರು. ದ್ವೈತ ಸಿದ್ಧಾಂತ ಪ್ರಮೇಯಗಳು ಇವರ ಕೃತಿಗಳಲ್ಲಿ ಸರಳವಾಗಿ ಮೂಡಿ ಬಂದಿವೆ ಇಂದಿಗೂ ಮೊದಲಕಲ್ಲು ಅತ್ಯಂತ ಮಹಿಮಾನ್ವಿತ ಹರಿದಾಸ ಕ್ಷೇತ್ರವೆಂದು ಪ್ರಸಿದ್ಧವಾಗಿದೆ

## 19 ಶ್ರೀ ಹೊನ್ನಾಳಿ ವೆಂಕಟದಾಸರು

"ಹದಿನಾಲ್ಕು ಲೋಕಕೆ ದಾತಾ ಶ್ರೀ ಹರಿ ಪಾಂಡವರ ಮನೆ ದೂತ" ಎಂದು ಅತ್ಯಂತ ಜನಪ್ರಿಯವಾಗಿರುವ ಕೃತಿಯ ರಚನೆಕಾರ

ಶ್ರೀ ವೆಂಕಟವಿಠಲಾಂಕಿತರಾದ ಶ್ರೀ ಹೊಸ್ಕೋಟೆ ವೆಂಕಟದಾಸರು. ಇವರು ಶ್ರೀ ವಿಜಯದಾಸರ ಶಿಷ್ಯರಾಗಿ, ಅವರಿಂದ ದಾಸ ದೀಕ್ಷೆಯನ್ನು ಪಡೆದವರು ಶ್ರೀ ಜಗನ್ನಾಥದಾಸರ ಒಡನಾಡಿಗಳು ಇವರ ಕೃತಿಗಳು ಭಾವಪೂರ್ಣವಾಗಿದ್ದು, ಅತ್ಯಂತ ಭಕ್ತಿ ಭಾವದಿಂದ ಕೂಡಿ ಸರಳವಾಗಿವೆ. ಇವರ ಕೃತಿಗಳೆಲ್ಲವನ್ನು, ಶ್ರೀ ವಿಜಯದಾಸರ ಅತ್ಯಂತ ಪ್ರಿಯ ಶಿಷ್ಯರಾದ ಶ್ರೀ ಮೋಹನದಾಸರು ಸ್ವತ ಬರೆದಿಟ್ಟಿರುವುದು, ಇವರ ವಿಶೇಷತೆಯನ್ನು ತೋರುತ್ತದೆ

## 20. ಶ್ರೀ ರಾಜಗೋಪಾಲದಾಸರು

ಕರ್ಜಗಿಯ ಶ್ರೀ ಗಲಗಲಿ ಗೋಪಾಲ ಕೃಷ್ಣಾಚಾರ್ಯರ ಶಿಷ್ಯರಾದ ಇವರು, ಕರ್ಜಗಿ ರಾಜಗೋಪಾಲದಾಸರೆಂದೇ ಖ್ಯಾತರು ಇವರ ಕೃತಿಗಳು ತಮ್ಮದೇ ಆದ ವಿಶಿಷ್ಟ ಶೈಲಿಯಿಂದ ಪ್ರಖ್ಯಾತವಾಗಿವೆ.

## 21 ಶ್ರೀ ವರದೇಶ ವಿಠಲದಾಸರು

ಶ್ರೀ ಪ್ರಾಣೇಶದಾಸರ ಮೊಮ್ಮಕ್ಕಳಾದ ಇವರು ಶ್ರೀ ರಾಘವೇಂದ್ರ ಸ್ವಾಮಿಗಳ ವಿಶೇಷ ಅನುಗ್ರಹಕ್ಕೆ ಪಾತ್ರರಾದವರು ಅಂದು ಮಂತ್ರಾಲಯದಲ್ಲಿ ಒಮ್ಮೆ ಇವರಿಗೆ ಶ್ರೀ ಮಠದ ಪರಂಪರೆಯ ಶ್ರೀ ರಘುನಾಥ ತೀರ್ಥರ ದಿವ್ಯ ದರ್ಶನ ದೊರೆತಿತೆಂದೂ, ಆ ನಂತರ ಅವರು ಲೌಕಿಕವನ್ನು ತೊರೆದು ಶ್ರೀ ಗೋಪಾಲದಾಸರ ಶಿಷ್ಯ ಪರಂಪರೆಯ ಕೊನೆಗೆ ಗುರು ಜಗನ್ನಾಥದಾಸರಲ್ಲಿ ಹರಿದಾಸ ದೀಕ್ಷೆಯನ್ನು ಪಡೆದು “ವರದೇಶ ವಿಠ್ಠಲ” ಎನ್ನುವ ಅಂಕಿತವನ್ನು ಪಡೆದರೆಂದು ಪ್ರತೀತಿ ಸಂಸ್ಕೃತ, ಕನ್ನಡ ಭಾಷೆಗಳಲ್ಲದೆ, ಇನ್ನೂ ಅನೇಕ ದೇಶೀಯ ಹಾಗೂ ವಿದೇಶೀ ಭಾಷಾ ಜ್ಞಾನವನ್ನು ಹೊಂದಿದ್ದ ಇವರ ಕನ್ನಡ ಪದ ಪದ್ಯ ಸುಳಾದಿಗಳು ಅತ್ಯಂತ ರಮ್ಯವಾಗಿದೆ

## 22 ಶ್ರೀ ಗುರು ಜಗನ್ನಾಥ ವಿಠಲದಾಸರು

“ಶ್ರೀ ಗುರು ಜಗನ್ನಾಥ ವಿಠಲ” ಅಂಕಿತದಲ್ಲಿ ಅನೇಕ ಕೃತಿಗಳನ್ನು ರಚಿಸಿ ಖ್ಯಾತರಾಗಿರುವವರು ಕೋಸಗಿ ಸ್ವಾಮಿ ರಾಯಾಚಾರ್ಯರು. ಇವರು ಸಂಸ್ಕೃತದಲ್ಲಿ ಉದ್ದಾಮ ಪಂಡಿತರು ಎರಡು ಭಾಷೆಗಳ ಮೇಲೂ ಅಪ್ರತಿಮ

ಹಿಡಿತ ಹೊಂದಿದ್ದ ಇವರು ಸಂಸ್ಕೃತದಲ್ಲೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳು ಗಾಂಭೀರ್ಯಕ್ಕೆ, ಪ್ರಾಸಕ್ಕೆ, ತಾತ್ವಿಕ ಸಂಪತ್ತಿಗೆ ಹೆಸರುವಾಸಿಯಾಗಿವೆ

## ದಾಸ ಸಾಹಿತ್ಯ ಪ್ರಭಾವ ಪ್ರವಾಹ

ಶ್ರೀಪಾದರಾಜರು ಹಚ್ಚಿಟ್ಟ ನಂದಾದೀಪ ವ್ಯಾಸರಾಜರು, ಪುರಂದರ ದಾಸರು, ವಾದಿರಾಜರು, ಕನಕದಾಸರು, ವಿಜಯದಾಸರು ಗೋಪಾಲದಾಸರು, ಜಗನ್ನಾಥದಾಸರು, ಮುಂತಾದವರಿಂದ ನಿರಂತರವಾಗಿ ಜನಜೀವನವನ್ನು ಬೆಳಗತೊಡಗಿತು ಆದರೆ ಶ್ರೀಪಾದರಾಜರ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾದ ವಿಜಯದಾಸರು ಶ್ರೀಪಾದರಾಜರ ಪ್ರಭಾವ ಪ್ರವಾಹವನ್ನು ಯಶಸ್ವಿಯಾಗಿ ಮುಂದೆ ಹರಿಸಿದರು ವಿಜಯದಾಸರ ಹಾರೈಕೆ ಆರೈಕೆಗಳಲ್ಲಿ ಬೆಳೆದ ಮೋಹನದಾಸರು ತಮ್ಮ ೨೦೭ ನುಡಿಗಳ ಕೋಲು ಹಾಡನ್ನು ಸಾಂಗತ್ಯ ರೂಪದಲ್ಲಿ ನೀಡಿ ದಾಸಸಾಹಿತ್ಯ ಧಾರೆಯನ್ನು ಪೋಷಿಸಿದರು. ವಿಜಯದಾಸರ ಸಮಕಾಲೀನರೂ, ಶಿಷ್ಯರೂ ಆಗಿದ್ದ ಆದವಾನಿಯ ಪಂಗನಾಮದ ತಿಮ್ಮಣ್ಣ ದಾಸರು ಆದವಾನಿಯ ದಿವಾನರಾಗಿದ್ದವರು ವಿಜಯದಾಸರಿಂದ ಹರಿದಾಸ ದೀಕ್ಷೆ ಪಡೆದು ವೇಣುಗೋಪಾಲವಿಠಲ ಅಂಕಿತದ ಮಾರ್ಮಿಕ ಹೃದಯಸ್ಪರ್ಶಿಯಾದ ಅನೇಕ ದೇವರನಾಮಗಳನ್ನು ರಚಿಸಿದರು ಇವರು ಪುರಂದರದಾಸರ ಸಮಕಾಲೀನರಾಗಿದ್ದ ವೈಕುಂಠದಾಸರ ಪುನರಾವತಾರವೆಂದು ಆಸ್ತಿಕರ ನಂಬಿಕೆ ಬೇಲೂರಿನ ಚೆನ್ನಕೇಶವಸ್ವಾಮಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು ಅವನನ್ನು ಮಗುವಿನಂತೆ ಆಡಿಸಿ ಮುದ್ದು ಮಾಡಿದ ಮಹಾನುಭಾವರಾಗಿದ್ದ ವೈಕುಂಠದಾಸರು ಕನಕದಾಸರ ಮಿತ್ರರೂ ಆಗಿದ್ದರು.

ವಿಜಯದಾಸರ ಇನ್ನೊಬ್ಬ ಶಿಷ್ಯರಾಗಿದ್ದ ಕಲ್ಲೂರು ಸುಬ್ಬಣ್ಣಾಚಾರ್ಯರು ಪ್ರಸಿದ್ಧ ಸುಧಾಪಂಡಿತರಾಗಿದ್ದು ಮುಂದೆ ವ್ಯಾಸವಿಠಲರೆಂದು ಅಂಕಿತವಡೆದು ವಿಜಯದಾಸರ ಮಹತಿ, ವ್ಯಕ್ತಿತ್ವ, ಹಾಗೂ ಸಾಧನೆಗಳನ್ನು ಪ್ರಕಟಪಡಿಸುವ ವಿಜಯಕವಚದಂತೆ ಅನೇಕ ಸಾರ್ಥಕ ಕೃತಿಗಳನ್ನು ರಚಿಸಿದರು ವಿಜಯದಾಸರಿಂದ ಪ್ರೇರಣೆಪಡೆದು ಹರಿದಾಸರಾದ ಇನ್ನೊಬ್ಬ ಆಚಾರ್ಯ

ರೆಂದರೆ ಬ್ಯಾಗವಟ್ಟಿಯ ಶ್ರೀನಿವಾಸಾಚಾರ್ಯರು. ಇವರು ಮಂತ್ರಾಲಯದ ವರದೇಂದ್ರಸ್ವಾಮಿಗಳ ಆಸ್ಥಾನ ವಿದ್ವಾಂಸರಾಗಿ ಪ್ರತಿವಾದಿ ಭಯಂಕರರೆನಿಸಿದ್ದರು. ಆದರೆ ವಿಜಯದಾಸರ ಹಾಗೂ ಅವರ ಇನ್ನೊಬ್ಬ ಶಿಷ್ಯ ಗೋಪಾಲದಾಸರ ಪ್ರಭಾವದಿಂದ ಜಗನ್ನಾಥದಾಸರಾಗಿ ಪರಿವರ್ತನೆ ಹೊಂದಿದ ಇವರು ಹರಿಕಥಾಮೃತಸಾರ, ತತ್ವಸುವ್ವಾಲಿಗಳಷ್ಟೇ ಅಲ್ಲದ ಅತ್ಯಂತ ಶ್ರೇಷ್ಠ ಮಟ್ಟದ ಕೀರ್ತನೆಗಳನ್ನು ರಚಿಸಿದರು.

ಗೋಪಾಲದಾಸರ ಸಮಕಾಲೀನರಾದ ಹೆಳವನಕಟ್ಟೆ ಗಿರಿಯಮ್ಮ ಹರಿದಾಸ ಸಾಹಿತ್ಯವನ್ನು ಸ್ತ್ರೀಯರೂ ಸಮೃದ್ಧಗೊಳಿಸಬಹುದು ಎನ್ನುವುದಕ್ಕೆ ನಿದರ್ಶನವಾಗಿದ್ದಾಳೆ. ರಾಣಿಬೆನ್ನೂರಿನ ಕರಣಿಕರ ಸೊಸೆಯಾದ ಈಕೆ, ಕನ್ನಡದಲ್ಲಿ ಅನೇಕ ದೇವರ ನಾಮಗಳನ್ನೂ, ಗ್ರಂಥಗಳನ್ನೂ ರಚಿಸಿದ್ದಾಳೆ

ಗೋಪಾಲದಾಸರ ಊರಾದ ಉತ್ತನೂರಿಗೆ ಸಮೀಪದಲ್ಲಿರುವ ಐಜಿಯ ವೆಂಕಟರಾಮಾಚಾರ್ಯರು ಪ್ರಸಿದ್ಧ ವಿದ್ವಾಂಸರಾಗಿದ್ದವರು. ಲೌಕಿಕ ಜೀವನದಲ್ಲಿ ವೈರಾಗ್ಯ ಮೂಡಿ ರಾಯರಮಠದ ಭುವನೇಂದ್ರ ತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿ ವ್ಯಾಸತತ್ವಜ್ಞರೆನಿಸಿದರು. ಆದರೆ ಇವರು ಮುಂದೆ ಹರಿದಾಸ ದೀಕ್ಷೆಯನ್ನು ಸ್ವೀಕರಿಸಿ ವಾಸುದೇವವಿಠಲ ಅಂಕಿತದಲ್ಲಿ ಅನೇಕ ದೇವರನಾಮಗಳನ್ನು ರಚಿಸಿದರು.

ವಿಜಯದಾಸರಿಂದ ಸ್ವಪ್ನದಲ್ಲಿ ಅನುಗ್ರಹಿತರಾದ ಮೊದಲುಕಲ್ಲಿನ ಶೇಷದಾಸರು ಮೊದಲುಕಲ್ಲು ಶ್ರೀನಿವಾಸನ ಪರಮಭಕ್ತರು. ಗದ್ವಾಲ ಪ್ರಾಂತದ ದೊರೆಯ ಬಳಿ ಅಧಿಕಾರ ಮಾಡಿದವರು. ಕಡೆಗೆ ವಿರಕ್ತರಾಗಿ ಚಿಂತರವೇಲಿ ಪ್ರಾಣದೇವರ ಬಳಿ ಸಾಧನೆಮಾಡಿ, ಪ್ರಮೇಯ ಭರಿತವಾದ ಅನೇಕ ದೇವರನಾಮಗಳನ್ನು ಹಾಡಿದವರು.

ಕಾಖಂಡಕಿಯ ಮಹೀಪತಿದಾಸರು ಬಿಜಾಪುರ ಸುಲ್ತಾನನ ಬಳಿ ಅಧಿಕಾರ ಮಾಡಿದ್ದ ಪಂಡಿತರು. ಜೀವನದಲ್ಲಿ ವೈರಾಗ್ಯಮೂಡಿ, ಭಾಸ್ಕರಸ್ವಾಮಿಗಳೆಂಬ ಅವಧೂತರಿಂದ ದೀಕ್ಷೆಪಡೆದು ಹರಿದಾಸರಿಗೆ ಅಪರೂಪವಾದ ಯೋಗ ಮಾರ್ಗದಿಂದ ಅಪರೋಕ್ಷಜ್ಞಾನ ಪಡೆದು ನೂರಾರು ಕೀರ್ತನೆಗಳನ್ನು ರಚಿಸಿ

ವರು ಇವರ ಕೃತಿಗಳಲ್ಲಿ ಭಕ್ತಿ, ಜ್ಞಾನಗಳಿರುವಂತೆ ಯೋಗಶಕ್ತಿಯೂ ಮಹತ್ವವಿದ್ದು, ಕನ್ನಡದಲ್ಲಿ ಕೆಲವು ಅಪೂರ್ವ ಕೃತಿಗಳನ್ನು ಇವರು ನೀಡಿದ್ದಾರೆ ಇವರ ಮಕ್ಕಳಾದ ಕೃಷ್ಣರಾಯರು ತಂದೆಯಿಂದಲೇ ಅಂಕಿತ ಪಡೆದು ಹರಿದಾಸರಾಗಿ ಗುರುಮಹೀಪತಿದಾಸರೆಂಬ ಅಂಕಿತದಿಂದ ಅನೇಕ ಸುಂದರ ಕೀರ್ತನೆಗಳನ್ನು ಗಜೇಂದ್ರಮೋಕ್ಷವೆಂಬ ಗ್ರಂಥವನ್ನು ರಚಿಸಿದ್ದಾರೆ.

ವಿಜಯದಾಸರ ನಂತರದಲ್ಲಿ ಚಿಂತಾಮಣಿಯಲ್ಲಿ ನೆಲೆಸಿದ್ದ ಪರಿಮಳಾಚಾರ್ಯರು ಶ್ರೀನಿವಾಸ ಕಲ್ಯಾಣವೆಂಬ ಹರಿದಾಸ ಕಾವ್ಯವನ್ನು ರಚಿಸಿ ಖ್ಯಾತರಾದರು ಸುರಪುರದ ಆನಂದದಾಸರು ಕಮಲೇಶವಿಠಲ ಅಂಕಿತದಲ್ಲಿ ಮನೋಜ್ಞವಾದ ಕೀರ್ತನೆಗಳನ್ನು ರಚಿಸಿದರು ಕದರಮಂಡಲಗಿ ಪ್ರಾಣದೇವರ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದ ಭೀಮಾಚಾರ್ಯರು 'ಕಾಂತೇಶ' ನಾಮಕ ಸ್ವಾಮಿಯನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದರು ಬಾಗೇಪಲ್ಲಿ ವ್ಯಾಸರಾಯರೆಂಬುವರು ತಂದೆ ಪುರಂದರವಿಠಲನ ಅಂಕಿತದಲ್ಲೂ, ಆದವಾನಿಯ ರಮಾಸುಂದರವಿಠಲದಾಸರು, ಕೋಸಗಿ ಆಚಾರ್ಯರು ಗುರುಜಗನ್ನಾಥವಿಠಲ ಎಂಬ ಅಂಕಿತದಲ್ಲೂ, ಹರಪನಹಳ್ಳಿ ಭೀಮವ್ವ ಭೀಮೇಶಕೃಷ್ಣ ಅಂಕಿತದಲ್ಲಿಯೂ ಅತ್ಯುತ್ತಮ ಕೃತಿಗಳನ್ನು ರಚಿಸಿ, ಹರಿದಾಸ ಸಾಹಿತ್ಯವನ್ನು ಸಮೃದ್ಧ ಮಾಡಿದರು

ಆಸಿಗ್ಯಾಳ್ ಗೋವಿಂದದಾಸರೂ. ಮಣೂರು ಹನುಮಂತದಾಸರು. ಮಾನವಿ ಗುಂಡಾಚಾರ್ಯರೂ, ಗುರುಗೋವಿಂದದಾಸರು, ತಂದೆ ವೆಂಕಟೇಶ ವಿಠಲದಾಸರು ಮುಂತಾದವರೂ ಉತ್ತಮ ಕೃತಿಗಳನ್ನು ನೀಡಿ ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ವಿಜಯದಾಸರಿಂದ ನೇರವಾಗಿ ಹರಿದಾಸ ಸಾಹಿತ್ಯಕ್ಕೆ ಬಂದವರಾದ ಗೋಪಾಲದಾಸರು ಹಯವದನವಿಠಲರು, ಮುದ್ದುವಿಠಲರು, ವೇಣುಗೋಪಾಲವಿಠಲರು ರಾಮಚಂದ್ರವಿಠಲರು ಮುಖ್ಯಪ್ರಾಣವಿಠಲ, ಮೋಹನದಾಸರು, ಹಯಗ್ರೀವವಿಠಲರು, ಸ್ವಪ್ನಲಬ್ಧ ಅಂಕಿತ ಪಡೆದ ಗುರುವಿಜಯವಿಠಲರು, ಪ್ರಖ್ಯಾತ ಹರಿದಾಸರೆನಿಸಿದವರು ಗೋಪಾಲದಾಸರ ಪೀಳಿಗೆಯಲ್ಲಿ ಮುಂದೆ ಬಂದ ಗುರುಗೋಪಾಲವಿಠಲ,

ವರದಗೋಪಾಲವಿಠಲ, ತಂದೆ ಗೋಪಾಲವಿಠಲ, ಕೇಶವವಿಠಲರು ಗೋಪಾಲ ದಾಸರಿಂದಲೇ ಅಂಕಿತ ಪಡೆದು ಹರಿದಾಸ ಸಾಹಿತ್ಯದಲ್ಲಿ ಕೃಷಿಮಾಡಿದರು

ಜಗನ್ನಾಥದಾಸರ ಶಿಷ್ಯಪರಂಪರೆ ಮಹತ್ವಪೂರ್ಣವಾದ ಹರಿದಾಸ ಸಾಹಿತ್ಯವನ್ನು, ಹರಿದಾಸ ಸಂಸ್ಕೃತಿಯನ್ನು ಬೆಳೆಸುವಲ್ಲಿ ಕ್ರಿಯಾತ್ಮಕವಾಯಿತು ಯೋಗೀಂದ್ರರಾಯರೆಂಬುವರು ಪ್ರಾಣೇಶ ವಿಠಲದಾಸರೆಂದು ಕರ್ಜಗಿದಾಸಪ್ಪ ನವರು ಶ್ರೀದವಿಠಲದಾಸರೆಂದೂ, ದಂಡಕಾರದಾಸರು ಶ್ರೀವಿಠಲದಾಸರೆಂದೂ, ಪ್ರೇಮದಾಸರು ಅಭಿನವಜನಾರ್ಧನವಿಠಲದಾಸರೆಂದೂ, ಮಾನಾಮಧುರ್ತಿ ದಾಸರು ವರೇಶವಿಠಲದಾಸರೆಂದೂ ಗೋಪತಿವಿಠಲರು ಅಣ್ಣಿಗೇರಿ ಗೋಪಾಲ ದಾಸರೆಂದೂ ಚಿಕ್ಕೋಡಿ ಆಚಾರ್ಯರು ಸಿರಿಪತ್ಯಾಂಕಿತದಾಸರೆಂದೂ ವಿಜಯ ಹಯಗ್ರೀವದಾಸರೆಂದೂ, ನಾಡಿಗ ತಿಮ್ಮಪ್ಪನವರು ಪ್ರಸನ್ನ ವೆಂಕಟವಿಠಲ ರೆಂದೂ, ಒರಲಿಪ್ಪಿ ನಾರಪ್ಪನವರು ಮನೋಹರ ವಿಠಲರೆಂದೂ, ನಂಜನ ಗೂಡಿನದಾಸರು ಬಾದರಾಯಣ ವಿಠಲರೆಂದೂ ಸುಪ್ರಸಿದ್ಧರಾಗಿ ಉತ್ಕೃಷ್ಟವಾದ ಹರಿದಾಸಕೃತಿಗಳನ್ನು ನೀಡಿದರು

ಹರಿಕಥಾಮೃತಸಾರಕ್ಕೆ ಫಲಶ್ರುತಿ ಬರೆದಿರುವ ಶ್ರೀದವಿಠಲದಾಸರ ಪರಂಪರೆಯಲ್ಲಿ ಧೀರೇಂದ್ರವಿಠಲರು ಪ್ರೇಮದಾಸರು, ಭಾಗ್ಯನಿಧಿವಿಠಲರು, ಶ್ರೀರಾಮವಿಠಲರು ಪ್ರಸಿದ್ಧರಾದ ಹರಿದಾಸರಾದರು ಶ್ರೀರಾಮವಿಠಲರ ಶಿಷ್ಯ ರಾದ ಬಾಗೇಪಲ್ಲಿಯ ಗುರುರಾಮವಿಠಲದಾಸರು ಹುಟ್ಟು ಕುರುಡರಾದರೂ ಅನೇಕ ಪ್ರಭಾವಪೂರ್ಣ ಕೃತಿಗಳನ್ನು ರಚಿಸಿ ಖ್ಯಾತರಾದರು

ಆದವಾನಿಯ ಪಂಗನಾಮ ತಿಮ್ಮಣ್ಣದಾಸರ ಪರಂಪರೆ ವ್ಯಾಸವಿಠಲ ರಿಂದಲೇ ವ್ಯಾಪಕವಾಗಿ ಬೆಳೆಯತೊಡಗಿತು ವ್ಯಾಸವಿಠಲರ ಶಿಷ್ಯರಾದ ರಘುಪತಿ ವಿಠಲರು ವೇದಾಂತ ಕೀರ್ತನಕಾರರು ಇವರ ಅಧ್ಯಾತ್ಮ ಮೂಲ ವಿಧಿ ಗ್ರಂಥವು ದರ್ಶನಾಕಾಂಕ್ಷಿಗಳಿಗೆ ಉತ್ತಮ ಆಕರಗ್ರಂಥವಾಗಿದೆ ರಘುಪತಿ ವಿಠಲದಾಸರ ಶಿಷ್ಯರೇ ಶ್ರೀನಿವಾಸಭೂವರಾಹ ರಘುಪತಿ ವಿಠಲದಾಸರು. ಇವರ ಶಿಷ್ಯರು ಶ್ರೀಪತಿವಿಠಲರು ಅವರ ಶಿಷ್ಯರೇ ತಂದೆಶ್ರೀಪತಿವಿಠಲರು. ಅವರ ಶಿಷ್ಯರೇ ಬೀದರ ಅಣ್ಣಯ್ಯಾಚಾರ್ಯರು ತಿರುಪತಿಗೆ ಬ್ರಹ್ಮೋತ್ಸವಕ್ಕೆ ಹೋಗಿದ್ದ ಇವರು ತಿರುಪತಿಯಿಂದ ನಂದಾದೀಪವನ್ನು ಹೊತ್ತಿಸಿ ತಂದು ತಮ್ಮ

ಮನೆಯಲ್ಲಿ ನಿರಂತರ ನಂದಾದೀಪವನ್ನು ಸ್ಥಾಪಿಸಿದರು ಅಂದಿನಿಂದ ಇವರಿಗೆ ದೀಪದ ಅಣ್ಣಯ್ಯಾಚಾರ್ಯರೆಂದೇ ಹೆಸರಾಯಿತು. ಇವರು ಶ್ರೀನಿಧಿ ವಿಠಲದಾಸರಾಗಿ ಕೃತಿರಚನೆ ಮಾಡಿ ಸುಪ್ರಸಿದ್ಧರಾದರು. ಶ್ರೀವರ ವಿಠಲದಾಸರು ಇವರಿಂದ ಅಂಕಿತಪಡೆದವರು.

ಇವರ ಶಿಷ್ಯರೇ ಸುಪ್ರಸಿದ್ಧರಾದ ದೊಡ್ಡಬಳ್ಳಾಪುರದ ಮುದ್ದುಮೋಹನದಾಸರು ವಿಜಯದಾಸರ ತಪೋಕ್ಷೇತ್ರ ಚಿಪ್ಪಗಿರಿಯಲ್ಲಿ ಇವರಿಗೆ ಅಂಕಿತವಾಯಿತು ಈ ಪರಂಪರೆಯಲ್ಲಿ ಬಂದವರೇ ಶ್ರೀವರಮಪ್ರಿಯ ಸುಬ್ಬರಾಯದಾಸರು ಇವರು ತಂದೆಮುದ್ದುಮೋಹನವಿಠಲ ಎಂದೇ ಪ್ರಸಿದ್ಧರಾದರು ಅನೇಕ ಕೃತಿಗಳನ್ನು ರಚಿಸಿ ನೂರಾರು ಜನ ಹರಿದಾಸರಿಗೆ ದಾಸದೀಕ್ಷೆ ಇತ್ತ ಇವರು ಹರಿದಾಸ ಸಂಸ್ಕೃತಿಯನ್ನು ಪೋಷಿಸಿದರು. ದೊಡ್ಡಬಳ್ಳಾಪುರದ ದಾಸರ ಪರಂಪರೆಯಲ್ಲಿ ಬೆಳೆದು ಅಪರೋಕ್ಷಜ್ಞಾನಿಗಳೆಂದು ಖ್ಯಾತರಾದವರು ಕರಿವರದವಿಠಲದಾಸರು ಅಥವಾ ರಾಮದಾಸರು, ಇವರ ವಂಶದಲ್ಲಿ ಬಂದ ಶಂಕರಪುರದ ವೆಂಕಟದಾಸರು ಅವರ ಸಂತತಿಯವರೇ ಆದ ವೆಂಕಣ್ಣದಾಸರು, ವೆಂಕಣ್ಣದಾಸರ ಮಕ್ಕಳಾದ ಗೋಪೀನಾಥದಾಸರು, ಜಯಸಿಂಹದಾಸರು ಮುಂತಾದವರು ಹರಿದಾಸ ಸಾಹಿತ್ಯದ ಉನ್ನತಿಗ ಮಹತ್ವಪೂರ್ಣವಾಗಿ ಶ್ರಮಿಸಿದರು ದೊಡ್ಡಬಳ್ಳಾಪುರದಾಸರ ಪರಂಪರೆಯಲ್ಲೇ ಬಂದ ಮಧ್ವಾಂತರ್ಗತವಿಠಲದಾಸರೂ, ಉರಗಾದ್ರಿವಿಠಲದಾಸರೂ. ರಘುರಾಮವಿಠಲದಾಸರೂ, ಸೀತಾಪತಿರಾಮವಿಠಲದಾಸರೂ, ರಮಾಕಾಂತ ವಿಠಲದಾಸರೂ ಈ ಪರಂಪರೆಯ ಘನತೆಯನ್ನು ಎತ್ತಿ ಹಿಡಿದರು

ಸುರಪುರದ ಆನಂದದಾಸರ ಶಿಷ್ಯಪರಂಪರೆಯಲ್ಲಿ ಮಾವಕೇರದ ಭೀಮದಾಸರು ಪ್ರಸಿದ್ಧರಾದವರು. ಹರಿಕಥಾಮೃತಸಾರಕ್ಕೆ ವ್ಯಾಖ್ಯಾನ ಬರೆದಿರುವ ಕಮಲಾಪತಿದಾಸರು ಉತ್ತಮ ಕೃತಿಕಾರರು ಹಾಗೂ ಆನಂದದಾಸರ ಶಿಷ್ಯರು ಬೇಲೂರು ಕೇಶವದಾಸರ ತಂದೆ ಬೇಲೂರು ವೆಂಕಟಸುಬ್ಬದಾಸರು ಸುರಪುರದ ಆನಂದದಾಸರ ಶಿಷ್ಯರಾಗಿದ್ದವರು

ಸಂಸ್ಕೃತ ಹಾಗೂ ಉರ್ದು ಭಾಷೆಗಳಲ್ಲಿ ಅನೇಕ ಕೃತಿಗಳನ್ನು ರಚಿಸಿರುವ ಅಣ್ಣಾವಧೂತರು 'ವಿಠಲವ್ಯಾಸ' ಅಂಕಿತದಿಂದ ಕನ್ನಡದಲ್ಲಿಯೂ ಕೀರ್ತನೆಗಳನ್ನು ಮಾಡಿದ್ದಾರೆ. ಇಭರಾಂಪುರದ ಅಪ್ಪಾ ಅವರು ಹರಿದಾಸ ಸಾಹಿತ್ಯ

ವಾಹಿನಿಯ ವಿಶಿಷ್ಟ ಪ್ರೇರಣೆಯಾದವರು. ಅವರ ಶಿಷ್ಯರಾದ ವಿಜಯರಾಮಚಂದ್ರ ವಿಠಲದಾಸರು ಹಾಗೂ ಅವರ ಮಗಳು ಚೇಚಮ್ಮನು ಕನ್ನಡದಲ್ಲಿ ಪದಪದ್ಯಗಳನ್ನು ರಚಿಸಿದರು ಚೇಚಮ್ಮ 'ಹನುಮೇಶವಿಠಲ' ಅಂಕಿತದಲ್ಲಿ ಕೃತಿ ರಚಿಸಿದ್ದಾಳೆ ಕವರಮಂಡಲಗಿ ಪಾಂಡುರಂಗ ಎನ್ನುವ ಅಂಕಿತದಿಂದ ಸಹಸ್ರಾರು ಕನ್ನಡ ಕೃತಿಗಳನ್ನು ರಚಿಸಿರುವ ಶ್ರೀನಿವಾಸದಾಸರು ಸತ್ಯಪರಾಯಣ ತೀರ್ಥರ ಸಮಕಾಲೀನರು ದಾಸರ ಸ್ಥಳವಾದ ಕಿನ್ನಾಳಕ್ಕೆ ಒಮ್ಮೆ ಸತ್ಯಪರಾಯಣರು ಬಂದಿದ್ದಾಗ ದಾಸರನ್ನು ನೋಡಿ 'ದಾಸರೇ ಈ ಹೊರೆ ಮೀಸೆಯಾಕೆ' ಎಂದರಂತೆ ದಾಸರು ಥಟ್ಟನೇ "ಬುದ್ಧಿ ! ನವದ್ವಾರಕ್ಕೆ ಬಾಯಿ ಮಹಾದ್ವಾರ, ಆ ಮಹಾದ್ವಾರಕ್ಕೆ ಮಕರತೋರಣ ಎಂದರಂತೆ.' ಇವರ ಕೃತಿಗಳು ಎಷ್ಟು ಜನಪ್ರಿಯವಾಗಿತ್ತೆಂದರೆ 'ಕನಕದಾಸರ ಗುಟ್ಟು ಶ್ರೀನಿವಾಸದಾಸರ ತಿಟ್ಟು' ಎಂಬ ನಾಣ್ಣುಡಿಯೇ ದಾಸಪಂಥದಲ್ಲಿ ರೂಢಿಯಲ್ಲಿತ್ತು

ಇಂದಿರೇಶ ವಿಠಲಾಂಕಿತರಾದ ಹರಪನಹಳ್ಳಿ ರಾಮಾಚಾರ್ಯರೂ ಹರಿದಾಸ ಸಾಹಿತ್ಯದಲ್ಲಿ ಅಗಾಧ ಕೃಷಿಮಾಡಿದವರು ಇವರ ಶಿಷ್ಯರಾದ ಗುರುಇಂದಿರೇಶದಾಸರು ಘಟಿಕಾಚಲದ ಪ್ರಾಣದೇವರನ್ನು ಕುರಿತು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ.

ಮೊನ್ನಾಳಿ ವೆಂಕಟದಾಸರಂತೂ ವಿಜಯದಾಸರ ನೇರಶಿಷ್ಯರು. ಜಗನ್ನಾಥದಾಸರ ಒಡನಾಡಿಗಳು. ವೆಂಕಟದಾಸರ ಪದಪದ್ಯ ಸುಳಾದಿಗಳನ್ನು ಚಿಪ್ಪಗಿರಿ ಮೋಹನದಾಸರೇ ತಮ್ಮ ಸ್ವಹಸ್ತದಿಂದ ಬರೆದಿದ್ದಾರೆ ಮೊನ್ನಾಳಿ ದಾಸರ ಪರಂಪರೆಗೆ ಸೇರಿದ ಶ್ರೀನಿವಾಸದಾಸರು 'ಜಯವಿಠಲ' ಅಂಕಿತದಿಂದ ಅಪೂರ್ವವಾದ ದೇವರ ನಾಮಗಳನ್ನು ರಚಿಸಿದ್ದಾರೆ ವಿರಾಡ್ರೂಪವರ್ಣನೆ, ಮೋಹಿನಿ ರೂಪವರ್ಣನೆ. ದ್ವಾರಕಾವರ್ಣನೆಗಳನ್ನು ಕನ್ನಡದ ಲಾವಣಿ ಧಾಟಿಯಲ್ಲಿ ಇವರು ಬರೆದರು ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಮಹಾರಾಜರು ಒಮ್ಮೆ ಹರಿದಾಸರಿಗೆ 'ಅರಮನೆಯನ್ನು ವರ್ಣಿಸುವವರು ಯಾರಾದರೂ ಇದ್ದರೆ ಬನ್ನಿರಿ' ಎಂದು ಆಹ್ವಾನವಿತ್ತರು. ಆಗ ಶ್ರೀನಿವಾಸ ದಾಸರು ಎದ್ದು ನಿಂತು ಪ್ರಭು, ನನಗೆ ರಾಜರ ಅರಮನೆ, ಸಿರಿಮನೆಗಳನ್ನು ಬಣ್ಣಿಸಿ ಅಭ್ಯಾಸವಿಲ್ಲ. ಹರಿಮನೆಯನ್ನಾದರೆ ಈಗಲೇ ಬಣ್ಣಿಸಬಲ್ಲೆ' ಎಂದು

ಬಣ್ಣಿಸತೊಡಗಿದಾಗ ಕೃಷ್ಣರಾಜ ಒಡೆಯರು ಪರಮಾಶ್ಚರ್ಯಭರಿತವಾಗಿ ಗೌರವಿಸಿದರು. ಇದೇ ಪೀಳಿಗೆಯ ಮೈಸೂರು ಕೃಷ್ಣದಾಸರು ಗುರು ಶ್ರೀನಿವಾಸ ವಿಠಲ ಅಂಕಿತದಿಂದ ಹಲವು ಕೀರ್ತನೆಗಳನ್ನು ಬರೆದಿದ್ದಾರೆ. 'ಗಜಚರಿತ್ರೆ' ಮತ್ತು 'ಸಂಪೂರ್ಣ ಭಗವದ್ಗೀತೆ'ಯನ್ನು ಭಾಮಿನೀಷಟ್ಪದಿಯ ಛಂದಸ್ಸಿನಲ್ಲಿ ಆಕರ್ಷಕ ಶೈಲಿಯ ಕನ್ನಡದಲ್ಲಿ ರಚಿಸಿದ್ದಾರೆ

ಇಭರಾಮಪುರದ ಅಪ್ಪಾ ಅವರ ಅತ್ಯಂತ ಪ್ರಿಯಶಿಷ್ಯರಾದ ಟಿಪ್ಪಾಜಿ ವೆಂಕಟರಾಯರು 'ಜಯೇಶವಿಠಲ' ಎಂಬ ಅಂಕಿತದಿಂದ ಅಪೂರ್ವ ಕೃತಿಗಳನ್ನು ರಚಿಸಿದರು ಕಷ್ಟೀಮನೆಯಲ್ಲಿ ನಿರಂತರವೂ ಹರಿದಾಸ ಸಂಸ್ಕೃತಿಯನ್ನು ಪೋಷಿಸಿಕೊಂಡು ದಾಸಕೂಟದ ಧರ್ಮಸ್ಥಳವನ್ನಾಗಿ ಮೈಸೂರಿನ ಕಷ್ಟೀಮನೆಯನ್ನು ಪರಿವರ್ತಿಸಿದರು

ಸವಣೂರಿನ ದಿವಾನರಾಗಿದ್ದ ಖಿಂಡರಾಯರ ಮಕ್ಕಳಾದ ದೂರ್ವಾಸ ರಾಯರಿಗೆ ಮೈಸೂರಿನ ದಿವಾನ್ ಪೂರ್ಣಯ್ಯನವರು ತಮ್ಮ ನಂತರ ಮೈಸೂರು ಸಂಸ್ಥಾನದ ದಿವಾನರನ್ನಾಗಿ ಮಾಡಬೇಕೆಂದು ಸಂಕಲ್ಪಿಸಿದರು ಅದಕ್ಕೆ ಮಹಾರಾಜರ ಸಮ್ಮತಿಯೂ ದೊರಕಿತ್ತು ಆದರೆ ಕೆಜಗಿಯ ಪ್ರಾಣವಿಠ್ಠಲ ದಾಸರು ದೂರ್ವಾಸರಾಯರನ್ನು ಏಕಾಂತದಲ್ಲಿ ಕರೆದು ಕೃಷ್ಣರಾಜರ ದಿವಾನರಾಗುವುದಕ್ಕಿಂತ ನಮ್ಮ ಕೃಷ್ಣರಾಯನ ದಾಸನಾಗು ಎಂದು ಉಪದೇಶ ಮಾಡಿದರು ತಕ್ಷಣವೇ ವಿರಕ್ತಿ ಮೂಡಿ ದೂರ್ವಾಸರಾಯರು ದಾಸದೀಕ್ಷೆ ಪಡೆದು ಭಾಗ್ಯನಿಧಿವಿಠಲ ಎಂಬ ಅಂಕಿತದಿಂದ ಅನೇಕ ದೇವರನಾಮಗಳನ್ನು ರಚಿಸಿದರು ದಿವಾನರಾಗಿ ಬರಬೇಕಾದವರು ಹರಿದಾಸರಾಗಿ ಬಂದಾಗ ಪೂರ್ಣಯ್ಯನವರೂ ಮಹಾರಾಜರೂ ನೋಡಿ ಪ್ರಭಾವಿತರಾಗಿ ವಿಶೇಷ ಗೌರವಾದರಗಳನ್ನು ವ್ಯಕ್ತಪಡಿಸಿದರು "ಧನವಿಲ್ಲದಯ್ಯ. ಸಾಧನ ಸಿಕ್ಕಿಲ್ಲ ದಯ್ಯ, ತನುವಿಲ್ಲದಯ್ಯ, ದಾತನು ಎನಿಸಯ್ಯ, ಜನ ಬರುವರೋ ಸಜ್ಜನರಾರ ರಯ್ಯಾ,' ಮುಂತಾದ ಜನಪ್ರಿಯ ಕೃತಿಗಳನ್ನು ರಚಿಸಿದರು.

ಪ್ರಾಣೇಶದಾಸರ ಬಂಧುಗಳಾದ ವರದೇಶವಿಠಲರು ವರದೇಂದ್ರರ ಭಕ್ತರಾಗಿದ್ದು, ಗುರುಜಗನ್ನಾಥದಾಸರಿಂದ ವರದೇಶವಿಠಲ ಎಂಬ ಅಂಕಿತ ಪಡೆದರು ಕನ್ನಡ, ಉರ್ದು. ಪಾರ್ಸಿ ಮರಾಠಿ ಭಾಷೆಗಳಲ್ಲಿ ಪಾಂಡಿತ್ಯವಿದ್ದ

ವರದೇಶ ವಿಠಲರು 'ಪ್ರಹ್ಲಾದ ಚರಿತ್ರೆ', 'ವರದೇಂದ್ರರ ಸ್ವಪ್ನವೃಂದಾವನಾಖ್ಯಾನ' ಮುಂತಾದ ಕೃತಿಗಳನ್ನು ರಚಿಸಿದ್ದೇ ಅಲ್ಲದೆ ಅನೇಕ ಸ್ತೋತ್ರ, ಪದ, ಉಗಾಭೋಗಗಳನ್ನು ರಚಿಸಿದರು

ಆಸಿಗ್ಯಾಳ ಗೋವಿಂದದಾಸರು ಸಿರಿಗೋವಿಂದ ವಿಠಲ ಎನ್ನುವ ಅಂಕಿತದಿಂದ ಪ್ರಖ್ಯಾತರಾದವರು, ಇವರ ಮನೆತನದಲ್ಲಿ ಪ್ರತಿ ಮೂರನೆಯ ತಲೆಮಾರಿಗೊಮ್ಮೆ ಒಬ್ಬ ದಾಸರು ಆಗಿಹೋಗಿದ್ದಾರೆ ವರಕವಿಗಳಾಗಿದ್ದ ಇವರು 'ಕನಕಾಂಗಿ ಕಲ್ಯಾಣ'ವೆಂಬ ಬಯಲಾಟವನ್ನೂ, ಪುರಂದರದಾಸರ ಬದುಕನ್ನು ಆಧಾರವಾಗಿಟ್ಟುಕೊಂಡಿರುವ 'ದಾಸಪ್ರಬಂಧ' ನಾಟಕವನ್ನು ಬರೆದಿದ್ದಾರೆ ಹರಿದಾಸ ಸಂಸ್ಕೃತಿಯಲ್ಲಿ ಕ್ರಾಂತಿಕಾರರಾಗಿ ಬದಲಾವಣೆ ಮಾಡಿದ ಆಸಿಗ್ಯಾಳ ಗೋವಿಂದದಾಸರು ಅನೇಕ ಹರಿಜನರಿಗ ದಾಸ ದೀಕ್ಷೆ ನೀಡಿ ಜ್ಞಾನದಾನ ಮಾಡಿದರು

ವ್ಯಾಸರಾಜರ ಸಾಕ್ಷಾತ್ ಶಿಷ್ಯರಾಗಿದ್ದ ಗೋವಿಂದದಾಸ ಒಡೆಯರು ವ್ಯಾಸರಾಜರಿಂದಲೇ ಪ್ರೇರಿತರಾಗಿ ಅವರಿಂದ ಗುರುಮುದ್ದುಕೃಷ್ಣ' ಎನ್ನುವ ಅಂಕಿತವನ್ನು ಪಡೆದು ದಾಸಪಂಥದಲ್ಲಿಯೂ ಉತ್ತಮ ಕೃಷಿ ಮಾಡಿದರು ವಿಜಯದಾಸರು, ಜಗನ್ನಾಥದಾಸರು, ವರದಗೋಪಾಲವಿಠಲದಾಸರು ಗೋವಿಂದ ಒಡೆಯರ ಸಾಧನೆಯನ್ನು ಕೊಂಡಾಡಿದರು

ಮುದೇನೂರ ಆಚಾರ್ಯರೆಂದೇ ಖ್ಯಾತರಾದ ಗೋಪಾಲಕೃಷ್ಣ ವಿಠಲ ಎಂಬ ದಾಸರು ಆರ್ತಭಾವ ತುಂಬಿದ ಪ್ರಮೇಯಭರಿತ ಕೀರ್ತನೆಗಳನ್ನು ರಚಿಸಿದರು ಇವರು ಮುದೇನೂರಿನಲ್ಲಿ ಒಂದು ಪ್ರಾಣದೇವರನ್ನು ಪ್ರತಿಷ್ಠಾಪಿಸಿದರು ಅಲ್ಲಿ ಜೋಷರ ಕನಕನೆಂಬ ಒಬ್ಬ ಶಿಷ್ಯ ಇವರಿಗಿದ್ದು, ದಾಸರು ನಿರ್ಯಾಣ ಹಾದ ಹನ್ನೊಂದನೆಯ ದಿನವೇ ಅವನೂ ಇಹಲೋಕ ವ್ಯಾಪಾರವನ್ನು ತ್ಯಜಿಸಿದನು

ಬಡೋಳಿಯ ವೆಂಕಟದಾಸರು ಏಕಾದಶೀ ಮಹಾತ್ಮೆ, ವಿರಾಟಪರ್ವ, ರಾಮಪಾರಿಜಾತ, ರುಕ್ಮಾಂಗದ ನಾಟಕ, ನಳೋಪಾಖ್ಯಾನ, ಅಂಬರೀಷ ನಾಟಕ, ಕೃಷ್ಣಪಾರಿಜಾತ, ಮುಂತಾದ ಗ್ರಂಥಗಳನ್ನು ಬರೆದಿರುವುದಷ್ಟೇ ಅಲ್ಲದೆ ಅನೇಕ ದೇವರ ನಾಮಗಳನ್ನು ರಚಿಸಿದ್ದಾರೆ.

ಶತಾಯುಷಿಗಳಾಗಿದ್ದ ಶ್ರೀ ವೆಂಕಟೇಶ ವಿಠಲ ದಾಸರು ಹರಿದಾಸ ದೀಕ್ಷೆಯ ಸ್ವೀಕಾರಕ್ಕೆ ಮುಂಚೆ ವೈಶ್ಯವರ್ಗದ ಪುರೋಹಿತರಾಗಿದ್ದರು "ರಾಜಾ ರಾಷ್ಟ್ರಕೃತಂ ಪಾಪಂ, ರಾಜಪಾಪಂ ಪುರೋಹಿತ-" ಎಂಬ ಸಂಸ್ಕೃತವಚನ ಇವರ ಕಿವಿಗೆ ಬಿದ್ದೊಡನೆಯೇ ಅದರಿಂದ ಪ್ರಭಾವಿತರಾಗಿ ಪೌರೋಹಿತ್ಯ ತ್ಯಜಿಸಿ ಸುರಪುರದ ಆನಂದದಾಸರಿಂದ ವೆಂಕಟೇಶ ವಿಠಲ ಎಂಬ ಅಂಕಿತ ಪಡೆದು ಹರಿದಾಸರೆಂದೇ ಪ್ರಖ್ಯಾತರಾದರು

ಇಂದಿರೇಶ ಅಂಕಿತದ ಹರದನಹಳ್ಳಿ ಶ್ಯಾಮಾಚಾರ್ಯರು ಸುರಪುರದ ಆನಂದದಾಸರ ಶಿಷ್ಯರು ಅನೇಕ ಆಖ್ಯಾನಗಳನ್ನು, ಜಾವಡಿಗಳನ್ನು ರಚಿಸಿರುವ ಇವರು ಪ್ರಖ್ಯಾತ ಹರಿದಾಸರು

ಕೊಯಮತ್ತೂರಿನ ಶ್ಯಾಮಾಚಾರ್ಯರು ರಂಗವಿಠಲ ಚಿಕ್ಕದಾಸರು ಎಂಬ ಅಂಕಿತದಿಂದ ಅನೇಕ ಕೀರ್ತನೆ ಸುಳಾದಿಗಳನ್ನು ರಚಿಸಿದರು

ವ್ಯಾಸರಾಜ ಮಠದ ವಿದ್ಯಾರತ್ನಾಕರ ತೀರ್ಥರು ವಿದ್ಯಾರತ್ನಾಕರ ಹಾಗೂ ಸಾಮಗಿರಿಯ ನರಹರಿ ಎಂಬ ಅಂಕಿತಗಳಿಂದ ಅನನ್ಯವಾದ ಹರಿದಾಸ ಕೃತಿಗಳನ್ನು ಕನ್ನಡದಲ್ಲಿ ರಚಿಸಿದರು ವ್ಯಾಸರಾಜ ಮಠದ ವಿದ್ಯಾಪ್ರಸನ್ನ ತೀರ್ಥರು ಪ್ರಸನ್ನ ಅಂಕಿತದಿಂದ ಮಧುರ ಮನೋಹರ ಕೀರ್ತನೆಗಳನ್ನು ರಚಿಸಿದರು

ಮುಂಡೇವಾಡಿ ದಾಸರೆಂದೇ ಖ್ಯಾತರಾದ ಉಗರಪ್ಪ ಆಚಾರ್ಯರು ತಮ್ಮ ವಿಶಿಷ್ಟ ಭಜನಾ ಪದ್ಧತಿಯಿಂದ ಅನೇಕ ಜನರನ್ನು ಆಕರ್ಷಿಸಿ ಅವರೆಲ್ಲರಿಗೆ ಹರಿದಾಸ ದೀಕ್ಷೆ ನೀಡಿ ಹರಿದಾಸ ಸಂಪ್ರದಾಯಕ್ಕೆ ಕಾಯಕಲ್ಪ ಮಾಡಿದರು

ಮಾಧ್ವ ಹರಿದಾಸ ಪರಂಪರೆಗೆ ಸೇರದಿದ್ದರೂ ಹರಿದಾಸ ಸಂಸ್ಕೃತಿಯನ್ನು ಸ್ವೀಕರಿಸಿ, ಮಾಧ್ವ ಹರಿದಾಸರಿಂದ ಪ್ರಭಾವಿತರಾದ ಕೆಲವು ಹರಿದಾಸರು ಹತ್ತೊಂಬತ್ತನೆಯ ಶತಮಾನದಲ್ಲಿ ಕೀರ್ತನೆಗಳನ್ನು ರಚಿಸಿದರು ಅವರಲ್ಲಿ ಪ್ರಮುಖರಾದವರು ತಿಮ್ಮಪ್ಪದಾಸರು, ಅವರ ಪುತ್ರ ನಾರಾಯಣ ದಾಸರು ಹಾಗೂ ಪಾವಂಜೆ ಹರಿದಾಸರು [1]

---

1 ಕಲಾಚೇತನ (ಅಭಿನಂದನಾ ಗ್ರಂಥ) ಹರಿದಾಸ ಪರಂಪರೆ (ಲೇಖನ) : ಪ್ರೊ॥ ಎಂ ವಿ ಸೀತಾರಾಮಯ್ಯ ಪು 109

ತುಮಕೂರಿನ ಬಳಿಯ ಚಿಕ್ಕನಾಯಕನಹಳ್ಳಿಯ ಬಳಿ ೧೭೮೪ರಲ್ಲಿ ಜನಿಸಿದವರು ತಿಮ್ಮಪ್ಪದಾಸರು ಇವರ ಪಿತಾಮಹರಾದ ವಾಸುದೇವಾಚಾರ್ಯರು ಸನ್ಯಾಸ ಸ್ವೀಕಾರ ಮಾಡಿ ವಾಸುದೇವಯತಿ ಎಂದೇ ಪ್ರಸಿದ್ಧರಾಗಿದ್ದರು ಅದ್ವೈತಸಿದ್ಧಾಂತದ ಬಗ್ಗೆ ಇವರು ರಚಿಸಿದ್ದ 'ವಾಸುದೇವಮನನ' ಎಂಬ ಗ್ರಂಥ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲೀಷಿಗೂ ಕನ್ನಡಕ್ಕೂ ಅನುವಾದಗೊಂಡಿದೆ ತಿಮ್ಮಪ್ಪದಾಸರು ಭಾಗವತ ಸಂಪ್ರದಾಯಸ್ಥರಾಗಿದ್ದು 'ಧ್ರುವಚರಿತ್ರೆ' ಎಂಬ ಸಾಂಗತ್ಯ ಗ್ರಂಥವನ್ನು ರಚಿಸಿದ್ದಾರೆ ಆ ಗ್ರಂಥದ ಆರಂಭದಲ್ಲೇ "ಹರಿದಾಸರ ದಾಸ ದಾಸರ ದಾಸ ಚರಣದಾಸರುಗಳಾ ನಿರುತ ಸೇವಿಪ ತಿಂಮದಾಸ ಪೇಳ್ದ ಧ್ರುವಚರಿತೆಯನಿದನು ಲಾಲಿಪುದು" ಎಂದು ಘೋಷಿಸಿದ್ದಾರೆ. "ಇವರು ತಮ್ಮ ಕೀರ್ತನೆಗಳಲ್ಲಿ ನೂರೆಂಟು ಕೀರ್ತನೆಗಳನ್ನು ಆಯ್ದು 'ಪೂಜಾವಿಧಾನ ಕೀರ್ತನೆಗಳು' ಎಂದು ಸಂಕಲಿಸಿದ್ದಾರೆ. ಈ ಕೀರ್ತನೆಗಳು ನವವಿಧಭಕ್ತಿಯನ್ನು ಪ್ರತಿಪಾದಿಸುವ ಭಕ್ತಿ ಕವನಗಳು'[1] ಭಾಗವತದ ದಶಮಸ್ಕಂಧವನ್ನು ಕನ್ನಡದಲ್ಲಿ ಮುನ್ನೂರಕ್ಕೂ ಹೆಚ್ಚು ಕೀರ್ತನೆಗಳ ರೂಪದಲ್ಲಿ ರಚಿಸಿ ಅದನ್ನು 'ಶ್ರೀಕೃಷ್ಣಬಾಲಲೀಲೆ' ಎಂದು ಕರೆದಿದ್ದಾರೆ

ಇವರ ಮಕ್ಕಳಾದ ನಾರಾಯಣದಾಸರು ತಮ್ಮ ತಂದೆಯಿಂದಲೇ ದಾಸದೀಕ್ಷೆ ಪಡೆದು ಅನೇಕ ಕೀರ್ತನೆಗಳನ್ನು ಆತ್ಮನಿವೇದನ ರೂಪದಲ್ಲಿ ರಚಿಸಿ ಭಗವಂತನಿಗೆ ಅರ್ಪಿಸಿದರು

ದಕ್ಷಿಣ ಕನ್ನಡದ ಮೂಲ್ಕಿಯ ಬಳಿಯ ಅತ್ತೂರು ಎಂಬಲ್ಲಿ ಸ್ಥಾನಿಕ ಬ್ರಾಹ್ಮಣ ಸಮಾಜದ ವೆಂಕಟಕೃಷ್ಣಯ್ಯನವರ ಪುತ್ರರಾದ ಪಾವಂಜೆ ಲಕ್ಷ್ಮೀನಾರಾಯಣಯ್ಯನವರು ಪಾವಂಜೆ ಹರಿದಾಸರೆಂದೇ ಖ್ಯಾತರಾದವರು 'ಶಿವದ್ವಿಜ'ರೆಂದು ಹೇಳಿಕೊಂಡಿರುವ ಅವರು ಶೈವ ಬ್ರಾಹ್ಮಣರು ಕಾಶಿಯ ವೈಷ್ಣವ ಮಠಾಧೀಶರಾಗಿದ್ದ ಗೌಡಸಾರಸ್ವತ ಬ್ರಾಹ್ಮಣ ಸಮಾಜದ ಧರ್ಮಗುರುಗಳಾಗಿದ್ದ ಭುವನೇಂದ್ರರ ಶಿಷ್ಯರಾದಮೇಲೆ ಇವರು ವೈಷ್ಣವಮತ ಸ್ವೀಕಾರ ಮಾಡಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ "ಕನಕಪುರಂದರ ಮುಖ್ಯದಾಸರಂತೆ ಗಣನೆಗೆ ಸಿಲುಕಿಲ್ಲ, ಜನರ ವಿಡಂಬನಕೆ ದಾಸನಾದರೂ ಭವ

---

1 ಅದೇ ಪು. 100

ಕೃಪಾರ್ಣವನೇ, ಕರುಣಿಸಬಾರದೇ" ಎನ್ನುವ ಇವರು "ಹರಿಸರ್ವೋತ್ತಮನೆಂದು ಧರೆಗೆ ಸಾರುತ ಬಂದು, ಪರ ವೈಷ್ಣವ ಮತವ ಸ್ಥಿರಮಾಡಿ ಧರಣಿಯೊಳಗೆ ತಾತ್ಪರ್ಯನಿರ್ಣಯವೆಂಬ ಪರಮ ಗ್ರಂಥವ ಗೈದ ಗುರು ಮಧ್ವಾಚಾರ್ಯ"ರನ್ನು ಸ್ತುತಿಸಿದ್ದಾರೆ

ಪುರಂದರದಾಸರ ಕಾಲದಲ್ಲೇ ಶ್ರೀ ವೈಷ್ಣವ ಪಂಗಡಕ್ಕೆ ಸೇರಿದ ವೈಕುಂಠದಾಸರು ವಾದಿರಾಜರೊಡನೆ ಹರಿದಾಸ ಸಾಹಿತ್ಯದ ಉದ್ದೀಪಕರಾಗಿದ್ದರು. "ಮಗುವು ಕಾಣಿರಯ್ಯ ಮಾಯದ ಮಗುವು ಕಾಣಿರಯ್ಯ, ಸುಗುಣ ವಾದಿರಾಜರೇ ಮೂಜಗವ ತನ್ನ ಉದರದೊಳಿಟ್ಟು" ಎಂದು ಹೇಳಿದ ವೈಕುಂಠದಾಸರಿಗೆ ವಾದಿರಾಜರು "ದಾಸೋತ್ತಮ ನೀನೇ, ಶ್ರೀವೈಕುಂಠ-ದಾಸೋತ್ತಮ ನೀನೇ ವರವೈಕುಂಠ ದಾಸೋತ್ತಮ ಎನಗ ಶ್ರೀ ಹರಿಯನ್ನು ತೋರಿಸಿ ಧನ್ಯನಮಾಡಿದೆ ಎಂದು ಅಭಿಮಾನ ಸೂಚಿಸಿ ನುಡಿದರು. ತಕ್ಷಣವೇ ವೈಕುಂಠದಾಸರು ಮಹಾನುಭಾವರಾದ ವಾದಿರಾಜರಂತಹ ಮನೀಷಿಗಳು "ಕೊಂಡಾಡಬಹುದೇ ಯತೀಂದ್ರ ಎನ್ನ" ಎಂದು ಮತ್ತೆ ಹಿರಿತನದ ಗೌರವವನ್ನು ವ್ಯಕ್ತಪಡಿಸಿದರು.

ಕನಕದಾಸರು ಜಾತಿಯಲ್ಲಿ ಕುರುಬರಾದರೂ ಕೇಶವನಾಮದಂತಹ ಕೃತಿಯನ್ನು ನೀಡಿ ಹರಿದಾಸ ಶ್ರೇಷ್ಠರೆನಿಸಿದರು ಕನ್ನಡದ ಜಾನಪದ ಗತ್ತನ್ನು. ಭಾಷೆಯ ಜೀವಂತಿಕೆಯನ್ನು, ಸಧೃಢವಾಗಿ ತಮ್ಮ ಕೃತಿಗಳಲ್ಲಿ ನೀಡಿ ಕನಕದಾಸರು ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು

## ಹರಿದಾಸ ಸಾಹಿತ್ಯದ ಸಂಗ್ರಹ—ಸಂಕಲನ—ಸಂಪಾದನ

ಹರಿದಾಸ ಸಾಹಿತ್ಯದ ಸಮಗ್ರ ಇತಿಹಾಸ. ಸಾಧನೆ ಗೋರಾಬಾಳ್ ಹನುಮಂತರಾಯರು. ಬೇಲೂರು ಕೇಶವದಾಸರು, ನಾರಾಯಣರಾವ್ ಕಲಮದಾನಿ, ಪಾವಂಜೆ ಗುರುರಾವ್. ಸುಬೋಧ ರಾಮರಾವ್ ಮುಂತಾದವರ ವಿಶೇಷ ಪ್ರಯತ್ನದ ಮೂಲಕ ಬೆಳಕಿಗ ಬಂದಿತು ಪ್ರಾರಂಭದ ದಾಖಲೆ 'ಕವಿಚರಿತೆ'ಯಲ್ಲಿ ಮೂವತ್ತು ಜನ ದಾಸರ ಹೆಸರು ಉಕ್ತವಾಗಿದ್ದು, ಮೇಲಿನವರ ಪ್ರಯತ್ನದಿಂದಾಗಿ ಹದಿನೆಂಟು ಹತ್ತೊಂಬತ್ತನೆಯ ಶತಮಾನದಲ್ಲಿ ಬಾಳಿದ ದಾಸರ ಸಂಖ್ಯೆ ಮುನ್ನೂರರ ಗಡುವನ್ನು ಮುಟ್ಟಿದೆ [1]

1. ಹದಿನೆಂಟನೆಯ ಶತಮಾನದ ಕನ್ನಡ ಸಾಹಿತ್ಯ—ಡಾ॥ ಶ್ರೀನಿವಾಸ ಹಾವನೂರ ಪು 17

ಒಂದೂವರೆ ಶತಮಾನದ ಹಿಂದೆಯೇ ಮೊಗ್ಲಿಂಗ್ ಎಂಬ ಕ್ರೈಸ್ತಪಾದ್ರಿ ದಾಸ ಸಾಹಿತ್ಯದ ಅತ್ಯುತ್ತಮ ಕೀರ್ತನೆಗಳನ್ನು ರಚಿಸಿ ಜರ್ಮನ್ ಭಾಷೆಗೆ ಅನುವಾದ ಮಾಡಿದನು ೧೮೬೦ರಲ್ಲೇ ೫೧೬ ಪುಟಗಳ ಜರ್ಮನ್ ಕೃತಿಯ ಮೂಲಕ ಕನ್ನಡ ಹರಿದಾಸರನ್ನು ಜರ್ಮನ್ ಓದುಗರಿಗ ಪರಿಚಯ ಮಾಡಿಸಿ ಕೊಟ್ಟನು ಜರ್ಮನ್ ಓರಿಯಂಟಲ್ ಸೊಸೈಟಿಯ ಪತ್ರಿಕೆಯಲ್ಲಿ ಹರಿದಾಸ ಸಾಹಿತ್ಯವನ್ನು ಕುರಿತು ಹಲವು ಲೇಖನಗಳನ್ನು ಬರೆದನು ೧೮೮೦ರಲ್ಲಿ ತುಮಕೂರಿನಲ್ಲಿದ್ದ ಜಾನ್‌ಸ್ಟೀಫನ್‌ಸನ್ ಎನ್ನುವ ಪಾದ್ರಿ ಅರವತ್ತು ಉತ್ತಮ ಹರಿದಾಸ ಕೃತಿಗಳನ್ನು ಇಂಗ್ಲೀಷಿಗೆ ಅನುವಾದ ಮಾಡಿ ಪ್ರಕಟಿಸಿ ವಿಶ್ವಾದ್ಯಂತ ಪ್ರಚಾರ ಮಾಡಿದನು ಅರುಣೋದಯ' ಎನ್ನುವ ಪತ್ರಿಕೆಯನ್ನು ಹೊರಡಿಸಿ ಅದರಲ್ಲಿ ಅನೇಕ ದಾಸರ ಹಾಡುಗಳನ್ನು ನಿರಂತರ ಇಂಗ್ಲೀಷಿಗೆ ಅನುವಾದ ಮಾಡಿದನು

ದಾಸರ ಸುಪ್ರಸಿದ್ಧ ಕೃತಿಯಾದ

"ಆರು ಹಿತವರು ನಿನಗೆ ಈ ಮೂವರೊಳಗೆ ನಾರಿಯೋ ಧಾರುಣಿಯೋ ಬಲುಧನದ ಸಿರಿಯೋ' ಎಂಬುದನ್ನು ಇಂಗ್ಲೀಷಿಗೆ ಸ್ಟೀಫನ್‌ಸನ್ನನು ಅನುವಾದಿಸಿದ್ದ ಒಂದು ರೀತಿ ಹೀಗಿದೆ

Which please thee best of these three
Woman or land or Laxmi with abundant wealth ?
A man brings a female born of strangers
and makes her mistress of his house,
His undivided other half his wife,
on the seductive influence of this age
one cannot bear to see it.
Land over which a hundred crore of kings formerly ruled,
He calls his own, gets the title deed and engraved,
Builds a splendid house, and erects a fort and bastions,
Then the fine fellow yields up his breath,
and they cast him out... , ..... ,.."

೧೮೬೪ರಲ್ಲಿ ಚಾರ್ಲ್ಸ್‌ಗವಾನರು ಏಷ್ಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಅನೇಕ ಹರಿದಾಸರ ಕೀರ್ತನೆಗಳನ್ನು ಇಂಗ್ಲೀಷಿಗೆ ಅನುವಾದಿಸಿ ಭಾರತದ ಎಲ್ಲ ಭಾಷೆಗಳ ಜನರ ಗಮನ ಸೆಳೆದನು ೧೮೭೦ರ ವೇಳೆಗಾಗಲೇ ಅನೇಕ ಪಾಶ್ಚಾತ್ಯ ವಿದ್ವಾಂಸರು ದಾಸ ಸಾಹಿತ್ಯವನ್ನು ಕರ್ನಾಟಕದ ಹೊರಗಿನ ಜನಕ್ಕೆ ಇಂಗ್ಲೀಷ್ ಭಾಷೆಯ ಮೂಲಕ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಿದ್ದರು. ೧೮೭೩ರಲ್ಲಿ ಕಿಟ್ಟೆಲ್ ನಿಘಂಟು ಖ್ಯಾತಿಯ ರೆವರೆಂಡ್ ಕಿಟ್ಟೆಲ್ಲರು "VAISHNAVA DASAS OF KARNATAKA" ಎಂಬ ಪ್ರಸಿದ್ಧ ಗ್ರಂಥವನ್ನು ಪ್ರಕಟಿಸಿ ಅನೇಕ ಹರಿದಾಸರ ಶ್ರೇಷ್ಠ ಕೃತಿಗಳನ್ನು ಇಂಗ್ಲೀಷಿಗೆ ಅನುವಾದಿಸಿದರು "ಉಳಿದ ದೇವತೆಗಳೆಲ್ಲಾ ವಿಷ್ಣುವಿನ ಹಿಂದ ಎನ್ನುವ ಪುರಂದರದಾಸರ ಒಂದು ಕೃತಿಯನ್ನು ಹೀಗೆ ಅನುವಾದಿಸಿದ್ದಾರೆ

All the gods are behind VISHNU,
In charming devotion all are behind the snake lord,
All the published books are behind Bharatha,
All the trees are behind the sacred TULSI
All the vitality is behind the wind,
All the vows are behind 'Madhava's doctrine
All the excellent gifts are behind the gifts of food
In the world all are behind the badges of honour,
in being called a final devotee of Purandara Vittala [1]

ಕನ್ನಡದ ವಿದ್ವಾಂಸರುಗಳಿಗೆ ಹರಿದಾಸ ಸಾಹಿತ್ಯ ಸಂಗ್ರಹಣೆಯಲ್ಲಿ ಬಹಳಷ್ಟು ಆಸಕ್ತಿ ಇದ್ದರೂ ಅದರ ಪೂರ್ಣಫಲ ಪ್ರಾರಂಭವಾಗಿದ್ದು ಪಾವಂಜೆ ಗುರುರಾಯರಿಂದಲೇ ಉಡುಪಿಯ ಪರ್ಯಾಯಕ್ಕೆ ನಾಡಿನ ನಾನಾ ಭಾಗಗಳಿಂದ ಹೆಂಗಸರು ಬರುತ್ತಿದ್ದು, ಕೃಷ್ಣಮಠ ಅನಂತೇಶ್ವರ ದೇವಾಲಯ ಗೋಡೆಗಳ ಬಳಿ ಸಣ್ಣ ಗುಂಪುಗಳಾಗಿ ಕೂಡಿ ದಾಸರಪದಗಳನ್ನು ಭಕ್ತಿಪೂರ್ಣವಾಗಿ ಹಾಡುತ್ತಿದ್ದ ಕಾಲ ಆಗ ಗುರುರಾಯರು ಹಾಗೂ ಅವರ ಕುಟುಂಬವರ್ಗದವರೂ ಅವುಗಳನ್ನೆಲ್ಲಾ ಬರೆದಿಟ್ಟು ಪ್ರಕಟಿಸುತ್ತಿದ್ದರು ಉಡುಪಿಗೆ ಬರುತ್ತಿದ್ದ ಬೇಲೂರ ಕೇಶವದಾಸರು ಹಂಪೆ ಪ್ರಸಾದದಾಸರು

---

1 19ನೆ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ–ಡಾ ಹಾ ಮೊತ್ತಣ್ಣ

ಅವರಲ್ಲಿದ್ದು ಹರಿಕಥೆಮಾಡಿ ಹರಿದಾಸ ಸಾಹಿತ್ಯ ವಿಚಾರ ವಿನಿಮಯ ಮಾಡುತ್ತಿದ್ದರು ಸ್ತೋತ್ರ ಸಾಹಿತ್ಯ. ಹೆಣ್ಣುಮಕ್ಕಳ ಹಾಡು, ಯಕ್ಷಗಾನ ಗ್ರಂಥಗಳು, ಹರಿದಾಸ ಸಾಹಿತ್ಯ ಕೃತಿಗಳು, ಮುಂತಾದ ನಾನ್ನೂರ ಐವತ್ತು ಗ್ರಂಥ ಹಾಗೂ ಹೊತ್ತಗೆಗಳನ್ನು ಅವರು ಪ್ರಕಟಿಸಿದರು ಇವರ ಪುರಂದರದಾಸರು ಗ್ರಂಥ ಇಪ್ಪತ್ತೆರಡು ಮರು ಮುದ್ರಣಗಳನ್ನು ಕಂಡಿತು

ಆಧುನಿಕ ಸಂದರ್ಭದಲ್ಲಿ, ಶತಮಾನಗಳ ಹರಿದಾಸ ಸಾಹಿತ್ಯವನ್ನು ಸಂಗ್ರಹಿಸಿ, ಪ್ರಕಟಿಸಿ ಕನ್ನಡಿಗರಿಗೆ ನೀಡುವ ಮಹತ್ಕಾರ್ಯದ ಸಿಂಹಪಾಲು ಕೀರ್ತಿ ಗೋರೇಬಾಳು ಹನುಮಂತರಾಯರಿಗೆ ಸಲ್ಲುತ್ತದೆ ನೂರಕ್ಕೂ ಹೆಚ್ಚು ಹರಿದಾಸ ಗ್ರಂಥಗಳನ್ನು ಪ್ರಕಟಿಸಿರುವ ಇವರ ಕೃತಿಗಳ ಪುಟಸಂಖ್ಯೆ ಹತ್ತು ಸಾವಿರವನ್ನು ಮೀರಿದೆ ಪ್ರಾಣೇಶದಾಸರ ಕೃತಿಗಳ ಪ್ರಕಟಣೆಯಿಂದ ಆರಂಭಿಸಿ. ಪಂಚರತ್ನ ಟೀಕಾ ಸಹಿತವಾಗಿ ಹರಿಕಥಾಮೃತಸಾರ ಪ್ರಕಟಣೆಯವರೆಗೆ ಒಟ್ಟು ಹರಿದಾಸರ ಕೃತಿಗಳನ್ನು ಬೆಳಕಿಗೆ ತಂದರು ೧೯೯೬ರ ಸುಮಾರಿಗೆ ೩೫೦ ಸುಳಾದಿಗಳನ್ನು ೬೦೦೦ ದೇವರನಾಮಗಳನ್ನು, ಹನ್ನೊಂದು ನೂರು ಉಗಾಭೋಗಗಳನ್ನು. ಅನೇಕ ಗದ್ಯಪದ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದರು ತಮ್ಮ ಹೊಲಗದ್ದೆಗಳನ್ನು ಮಾರಿ ಬಂದ ಹಣವನ್ನು ಹರಿದಾಸರ ಕೃತಿಗಳ ಪ್ರಕಟಣೆಗಾಗಿ ಹಾಕಿದರು ವರದೇಂದ್ರ ಸಾಹಿತ್ಯ ಮಂಡಲದ ಮಾರ್ಗದರ್ಶನಮಾಡಿ ದಾಸ ಸಾಹಿತ್ಯ ಪ್ರಚಾರಕ್ಕಾಗಿಯೇ ದ್ವೈಮಾಸಿಕ ಪತ್ರಿಕೆಯನ್ನು ನಡೆಸಿದರು ಪಂಚಟೀಕಾ ರತ್ನಗಳೊಡನೆ ಅವರು ಪ್ರಕಟಿಸಿದ ಹರಿಕಥಾಮೃತಸಾರದ ಸಂಪುಟಗಳು ಅವರ ಅತ್ಯಂತ ಶ್ರೇಷ್ಠ ಕೊಡುಗೆ

ಹರಿದಾಸ ಸಾಹಿತ್ಯಕ್ಕೆ ಸುಬೋಧರಾಮರಾಯರು ಮಾಡಿದ ಸೇವೆಯೂ ಸ್ಮರಣೀಯ ಹರಿದಾಸ ಕೀರ್ತನ ತರಂಗಿಣಿ ಎಂಬ ಹೆಸರಿನಲ್ಲಿ ಉಪಲಬ್ಧವಿದ್ದ ಎಲ್ಲ ದಾಸರ ಕೃತಿಗಳನ್ನು ಪ್ರಕಟಿಸಿದರು ಸುಭೋಧಕುಸುಮಾಂಜಲಿಯ ಮೂಲಕ ಮಕ್ಕಳಿಗಾಗಿ ನೂರಮೂವತ್ತು ಕೃತಿಗಳನ್ನು ಪ್ರಕಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಡಾ॥ ವರದರಾಜಾಚಾರ್ಯರ ಹಿರಿತನದಲ್ಲಿ ಅನೇಕ ಉಲ್ಲೇಖನಾರ್ಹವಾದ ಸಂಶೋಧನಾತ್ಮಕ ಹಿನ್ನೆಲೆಯ ಉತ್ಕೃಷ್ಟ ಹರಿದಾಸ ಕೃತಿಗಳು ಪ್ರಕಟವಾಗಿವೆ ಶ್ರೀನಿವಾಸರಾವ್ ಕೊರಟಿಯವರು ಅನೇಕ ಹರಿದಾಸ ಸಾಹಿತ್ಯ ಕೃತಿಗಳನ್ನು ಬರೆದು ಪ್ರಕಟಿಸಿದ್ದಾರೆ

# ಹರಿದಾಸ ಲಕ್ಷಣ ಸುಳಾದಿ

## ಧ್ರುವತಾಳ

ಹರಿದಾಸ ಲಕ್ಷಣವಿರಬೇಕು ಈ ಪರಿ । ಗರುವ ಕೋಪ ಮದ ಮತ್ಸರ ಬಿಡಬೇಕು । ಮರುತ ಮತಕ್ಕೆ ಎಲ್ಲಿ ನರಿಗಾಣಸೆನುತಲಿ । ಪರೆಯೊಳು ಕೂಗಿ ಭಂಗುರ ಹೊಡೆಯಬೇಕು । ಎರಡಾರು ಪುಂಡ್ರ ವಿರಚಿಸಿ ಪಂಚಮುದ್ರ । ಧರರಾಗಿ ತಪ್ತಾಂಕಿತ ಧರಿಸಬೇಕು ಭುಜದಿ । ಸಿರಿಬೊಮ್ಮ ಭವಾದ್ಯರಿಗೆ ತರತಮ ಭೇದದಿಂದ । ಎರಗಿ ಎಸ್ಕೊಳಗಿದ್ದು ಪೂರೆಯೆಂದಾಡಲಿಬೇಕು । ಗುರುಹಿರಿಯರಿಗಾದವರ ಪೂರ್ವಕದಿಂದ । ಕರವ ಮುಗಿದು ನಮಸ್ಕರಿಸುತಲಿರಬೇಕು । ನೆರೆಹೊರೆಯವರಿಗ ಸಿರುತಪಲಿದ್ದರು ಬೇ । ನರಗೋಳಿಸದೆ ಸಂಚರಿಸುತಲಿರಬೇಕು । ಹರಣಪರಿಯಾಧೀನ ನೆರೆದ ಸತಿಸುತರು । ಸಿರುತ ಹರಿಗೆ ದಾಸರೆಂದು ಗಣಿಸಬೇಕು । ಹರಿದಿವಸ ಹರಿಚರಿತೆ ಹರಿಸ್ಮರಣೆ ಹರಿಪೂಜೆ । ಹರಿಶ್ರವಣ ಅಂತರ ಶುದ್ಧಿಯಿರಬೇಕು । ಹರಿಪರದೇವತೆ ವಿಜಯವಿಠಲಗತಿ ಸುರರಾದ್ಯರಿಗ ಎಂದು ಉರವಣಿಸಿ ನುಡಿಯಬೇಕು ॥ ॥ ೧ ॥

## ಮಟ್ಟತಾಳ

ಪರಧನ ಪರಸತಿ ಪರನಿಂದ್ಯದವರ । ಸರಸದಲ್ಲಿರದೆ ಚರಿಸಬೇಕು ದೂರ । ನರರು ಬೈದರೆ ಆದರವೆಂದು ತಿಳಿದು । ಹರುಷಪಡಲಿಬೇಕು ನಿರುತದಲಿ । ಸುರತರು ದೊರೆತಂತೆ ಕರೆದು ಪುಸ್ಕಿಸಿದರು । ಹಿರಿಹಿರಿಹಿಗ್ಗದೆ ಬರದು ತಾನಿರಬೇಕು । ನೆರೆದ ಸಂಪದದೊಳು ಚರಿಸಬಾರದು ಪೋಗಿ । ಬರಿದೆ ಕುಳಿತು ಹಾಳು ಹರಟೆಯನಾಡದಲೆ । ಮರಿಯಾದೆಯ ನೊಲ್ಲು ಇರಬೇಕು ತನ್ನೊಳು । ಪರಮ ತತ್ವವ ತಿಳಿದು ಮರುಳರಿಗರುಹದೆ ॥ ನರಿಯಬೇಕು ಸುಖ ಮರಳಿ ಮರಳಿ ನೆನೆದು । ಪರಮಗುಪ್ತನಾದ ವಿಜಯವಿಠಲನ । ನೆರನಂಬಿ ಬೇಕು ಕುರುಡ ಕಾಣಸುವಂತೆ ॥ ॥ ೨ ॥

## ತ್ರಿಪುಟತಾಳ

ಲೇಸಾದರು ಹರಿಯ ಕಾರುಣ್ಯವೆನಬೇಕು । ಲೇಸಾಗದೆ ಬಲು ಕ್ಲೇಶ ಬಂದೊದಗಲು । ಏನು ಜನ್ಮದ ಪಾಪರಾಶಿ ಬಂದೊದಗಿತೋ । ಈ ಶರೀರಕೆ ಬಂದು ಪ್ರಾಪ್ತವಾದದ್ದು ಅನುಭವ । ಏನಿದೆ ಬಿಡದೆಂದು ನಿತ್ಯದಿಂದಿರಬೇಕು । ಲೇಶವಾದರು ಮುನಿ ಹಚ್ಚಿಕೊಳ್ಳದೆ ಮಹಾ । ತೋಷದಲ್ಲಿರಬೇಕು ಸೋಯುವಲಿ । ಶ್ರೀಶನೆ ಗತಿಯೆಂದು ಬೇಸರದಲೆ ಬಂದ ಕ್ಲೇಶಗಳುಣಬೇಕು ಬಂದಾಗಲೂ । ದೇಶ ಕಾಲ ಗುಣ ಪರಿಪೂರ್ಣ ಪರಿಯಿರೆ । ಘಾಸಿ ಎಲ್ಲಿಯದೆಂದು ನಲಿಯಬೇಕು । ಪ್ರೀ ನತಿ ಕಾಲ ಪೇದ ಜೀವಪ್ರಳಯದಲ್ಲಿ । ನಾಶವಾಗದು ಬೇಧ ಸಿದ್ಧವೆಂದೆನಬೇಕು । ವಾಸುದೇವ ನಮ್ಮ ವಿಜಯವಿಠ್ಠಲನ್ನ । ದಾಸಾನುದಾಸರ ದಾಸನಾಗಲಿಬೇಕು ॥

## ಅಟ್ಟತಾಳ

ಒಡತನ ಬಂದರೆ ಹಿಗ್ಗುತಲಿರಬೇಕು । ಜಡನಾಗಿ ಬಾಹಿರದಲ್ಲಿ ತೋರಲಿಬೇಕು । ಅಡಿಗಡಿಗೆ ಲಜ್ಜೆಗೆಡಬೇಕು ಸರ್ವದಾ । ಒಡಲಿಗೆ ಚಿಂತೆ ಮಾಡದೆ ದೃಢವಿರಬೇಕು । ಒಡವೆ ವಸ್ತು ತಾಯಿತಂದೆ ಈ ಲೋಕದ । ಒಡೆಯ ಕೃಷ್ಣನೆಂದು ಬಿಡದೆ ನಂಬಲಿಬೇಕು । ಎಡೆಗೆ ಪರಿಮಿತ ಧಾನ್ಯ ತರಲಿಬೇಕು । ಕೊಡಬೇಕು । ಕೊಡಬೇಕು ಒಬ್ಬರಿಗದರೊಳು । ಕಡುಗಲಿ ವಿಜಯವಿಠಲನ ಪಾದ । ಪಿಡಿದು ಭಜಿಸಬೇಕು ನಲಿನಲಿದಾಡುತ ॥ ॥ ೪ ॥

## ಆದಿತಾಳ

ಉಟ್ಟುದಕ್ಕಿಂತ ಮೇಲು ಇಟ್ಟುದಕಿಂತ ಮೇಲು । ತೊಟ್ಟುದಕಿಂತ ಮೇಲು ವಿಠಲನ ಸ್ಮರಣೆ ಮನ । ಮುಟ್ಟಿ ಬಹಿರದಲ್ಲಿ ಅಟ್ಟಹಾಸದಿಂದ । ಚಿಟ್ಟಿಕ್ಕಿ ಕೂಗುವುದು ಇಷ್ಟು ಸುಖಕೆ ಮೇಲು । ದಟ್ಟಡಿಯಿಂದ ತಿಳಿದು ನಿಷ್ಠೆಯಿಂದಲಿರಲು । ಇಷ್ಟಪ್ರಾಪ್ತ್ರ ಅಪಗಾರಿಷ್ಟವು ಪರಿಹರ । ಹುಟ್ಟು ನಾಶವಿಲ್ಲದ ವಿಜಯವಿಠಲ ತಾನು । ಕೊಟ್ಟು ಸಾಕುವ ದಯವಿಟ್ಟು ದಾನವಮಾಡಿ ॥

## ಜತೆ

ಈ ಪರಿಯಿದ್ದವಗೆ ಅನಂತ ಜನುಮಕ್ಕು ।
ತಾಪತ್ರಯಗಳಿಲ್ಲ ವಿಜಯವಿಠಲ ಬಲ್ಲ ॥